ಶ್ರೀಶಾನುದಾಸ ಗ್ರಂಥಮಾಲಾ–೨೩ನೇ ಕುಸುಮ

# ಶ್ರೀ ವರವರಮುನಿಗಳವರ ದಿವ್ಯ ಚರಿತಾಮೃತಸಾರ ಮತ್ತು ಶ್ರೀಸೂಕ್ತಿಗಳು



ಸಾಧಾರಣೇ ತುಲಾ ಮೂಲೇ ಜಾತಂ ವರವರಂ ಮುನಿಂ ।
ಯತೀನ್ದ್ರಪ್ರವಣಂ ವಂದೇ ಯದುಶೈಲನಿವಾಸಿನಂ ॥

ಲೇಖಕ ಮತ್ತು ಗೌರವ ಸಂಪಾದಕ
'ವಿದ್ಯಾಭೂಷಣಂ' :- ಆ. ನ. ಶ್ರೀನಿವಾಸೈಯಂಗಾರ್,
ಬಿ.ಎಸ್.ಸಿ. (ಆನರ್ಸ್)

ಮೇಲುಕೋಟೆ ವೈರಮುಡಿ ಉತ್ಸವ : 5-4-71
ಗೋದಾ ಮಂದಿರಂ ಬೆಂಗಳೂರು–೩ ಬೆಲೆ : ೮೦ ಪೈಸೆ

ಅರಿಕೆ

"ಪರಮವೈದಿಕದರ್ಶನ"ವಾದ "ವಿಶಿಷ್ಟಾದ್ವೈತಸಿದ್ಧಾಂತ"ವನ್ನು ಬಹುಮುಖವಾಗಿ ಬೆಳೆಸಿದ ಭಗವದ್ರಾಮಾನುಜಾಚಾರ್ಯರ ನಿತ್ಯ ಸಾನ್ನಿಧ್ಯ ದಿಂದ "ದಕ್ಷಿಣಬದರಿಕಾಶ್ರಮ", "ವೈಕುಂಠವರ್ಧನಕ್ಷೇತ್ರ", "ಶ್ರೀಯಾದ ವಾದ್ರಿ", "ತಿರುನಾರಾಯಣಪುರಂ" ಎಂಬ ಮೇಲುಕೋಟೆ ಶ್ರೀವೈಷ್ಣವರಿಗೆ ಪರಮಾದರಣೀಯವಾಗಿದೆ. ಈ ದಿವ್ಯದೇಶದಲ್ಲಿ ಶ್ರೀಯತಿರಾಜ ಸಂಪತ್ಕುಮಾರನ ನೇತೃತ್ವದಲ್ಲಿ "ಯತಿರಾಜ-ರಾಮಾನುಜರ ಪುನರವತಾರ" ವೆಂದೂ "ವಿಶದವಾಕ್ಶಿಖಾಮಣಿ"ಯೆಂದೂ ಪ್ರಸಿದ್ಧರಾದ "ಶ್ರೀಮಣವಾಳ ಮಾಮುನಿ", "ಪೆರಿಯಜೀಯರ್" ಎಂಬ ಶ್ರೀವರವರಮುನಿಗಳ ತಿರುನಕ್ಷತ್ರದ ಆರನೇ ಶತಮಾನೋತ್ಸವ ಬಹು ಸಂಭ್ರಮದಿಂದ ಅತ್ಯಂತ ವಿಲಕ್ಷಣವಾಗಿ 1970ನೇ ತುಲಾಮಾಸದಲ್ಲಿ ಜರುಗಿದುದು ಮೇಲುಕೋಟೆಯ ಇತಿಹಾಸ ದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡಬೇಕಾದ ಸಂಗತಿ. 3-11-1970ನೇ (ತಿರುನಕ್ಷತ್ರ) ರಾತ್ರಿ ಶ್ರೀರಾಮಾನುಜಾಚಾರ್ಯರ ಜತೆಯಲ್ಲಿ ಯತಿರಾಜ ಸಂಪತ್ಕುಮಾರಸ್ವಾಮಿಯು ಎದುರಿಗೆ ಊರಿನ ರಥಬೀದಿಗಳಲ್ಲಿ ಮೆರವಣಿಗೆ ಯಲ್ಲಿ "ಉಪದೇಶರತ್ನಮಾಲೈ" ಯನ್ನು ಹಾಡುತ್ತಿದ್ದ ದಿವ್ಯ ಪ್ರಬಂಧಾ ಧ್ಯಾಪಕರೊಡನೆ ಹಿಂದೆ ವೇದಘೋಷವೂ ಮುಂದೆ ವಾದ್ಯಗಾನ ಗೋಷ್ಠಿಯೂ ಮೊಳಗುತ್ತಿರಲು, ಶ್ರೀವರವರಮುನಿಗಳು ದಯಮಾಡಿಸಿ ಭಕ್ತರೆಲ್ಲರೂ ಆನಂದಿಸುವಂತೆ ಅಪೂರ್ವವಾದ ಸೇವೆಯನ್ನಿತ್ತರು. ಆ ದಿವ್ಯಾಲಂಕಾರದ ಚಿತ್ರವನ್ನು ಹೊದಿಕೆಯ ಮೇಲೆ ಪ್ರಕಟಿಸಿದೆ. ಇದಕ್ಕೆ ಅನುಮತಿಯಿತ್ತ ಮೇಲುಕೋಟೆ "ಶ್ರೀವರವರಮುನಿ ಆರನೆಯ ಶತಮಾನೋತ್ಸವ ಸಮಿತಿ" ಗೆ ಅನೇಕ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ತಿರುನಾರಾಯಣಪುರಂ — ಅ. ನ. ಶ್ರೀ. ದಾಸನ್.

ಸಾಧಾರಣೇಮೀನಪುಷ್ಯಂ — ಗೌರವ ಸಂಪಾದಕ

ಶ್ರೀಮತೇ ರಾಮಾನುಜಾಯ ನಮಃ

# ಶ್ರೀ ವರವರಮುನಿ ದಿವ್ಯ ಚರಿತಾಮೃತಸಾರ ಮತ್ತು ಅವರ ಶ್ರೀಸೂಕ್ತಿ ಮುಕ್ತಾವಳಿ

## ೧. ಅವತಾರರಹಸ್ಯ, ಬಾಲ್ಯ ಮತ್ತು ವಿದ್ಯಾಭ್ಯಾಸ

ಸತ್ಸಂಪ್ರದಾಯ ಪ್ರವರ್ತಕರಾದ ಶ್ರೀ ಮಣವಾಳಮಾಮುನಿ, ವರವರಮುನಿ, ಯತೀಂದ್ರ ಪ್ರವಣ, ವಿಶದವಾಕ್‌ಶಿಖಾಮಣಿ, ಈಡು ಮುಪ್ಪತ್ತಾರಾಯಿರಪ್ಪೆರುಕ್ಕರ್, ಪೆರಿಯಜೀಯರ್, ಜೀಯರ್ ಎಂಬ ರಮ್ಯಜಾಮಾತೃಮುನಿಗಳು ಕ್ರಿ. ಶ. 1370ನೇ ಸಾಧಾರಣ ವರ್ಷದಲ್ಲಿ ತುಲಾ–ಆಶ್ವಯುಜಮಾಸದ 26ನೇ ದಿನ ಶುಕ್ಲ ಚತುರ್ಥೀ ಗುರುವಾಸರ ದೊಡನೆ ಕೂಡಿದ್ದ ಸರ್ವಸಿದ್ಧಿಗಳಿಗೂ ಮೂಲವಾದ **ತಿರುಮೂಲಂ** ಎಂಬ ನಕ್ಷತ್ರದಲ್ಲಿ ರಘುಮಹಾರಾಜನಂತೆ ಲೋಕಾಭ್ಯುದಯಕ್ಕಾಗಿ ನಮ್ಮಾಳ್ವಾರ್ರು ಅವತರಿಸಿದ **ಆಳ್ವಾರ್ ತಿರುನಗರಿ**, ಕುರುಕಾಪುರೀ,ತಿರುಕ್ಕುರುಹೂರ್ ಎಂಬ ದಿವ್ಯ ದೇಶದಲ್ಲಿ ಕೌಂಡಿನ್ಯಗೋತ್ರದ ದ್ವಿಜ ಕುಲತಿಲಕರಾದ, ತಿರುಮನ್ತ್ರಾರ್ಥ ಸಂಪ್ರದಾಯದ ಗುರುಪರಂಪರೆಗೆ ಸೇರಿದ, "ದೀಪ್ರಶಯಾನ"–ಜಿಹ್ವಾವದ ಧೀಶದಾಸರ ಸುಪುತ್ರರಾಗಿ ಜನಿಸಿದರು. ಇವರ ಮಾತಾಮಹರು ಪಿಳ್ಳೈ ಲೋಕಾಚಾರ್ಯರ ಶಿಷ್ಯರಾದ, 'ಶಿಕ್ಕಿಲ್‌ಕಿಡಾರಂ' ಎಂಬ ಗ್ರಾಮದಲ್ಲಿ ದರ್ಶನ ಪ್ರವಚನಪರರಾಗಿ ನೆಲೆಸಿದ್ದ, ಕೊಲ್ಲಿಕಾವಲದಾಸರೆಂಬ ಸುಂದರ ವರ ಗುರುಗಳು (ಕೋಟ್ಟಿಯೂರ್ ಅಳ. ಹಿಯಮಣವಾಳ ಪ್ಪೆರುಮಾಳ್ ಪ್ಪಿಳ್ಳೈ). ಶ್ರೀವರವರಮುನಿಗಳ ತಂದೆಯವರು ತಮ್ಮ ಮಾವಂದಿರನು ಆಶ್ರಯಿಸಿ ಅವರ ಸನ್ನಿಧಿಯಲ್ಲೇ ರಾಮಾನುಜ ದರ್ಶನದ ಸಕಲಾರ್ಥ ರಹಸ್ಯ ಗಳನ್ನೂ ಕಲಿತರು.

ಶ್ರೀಮನ್ನಾರಾಯಣನ ಹಾಸಿಗೆಯಾದ ಆದಿಶೇಷನೇ, ಅನನ್ತನೆಂಬ ನಾಗರಾಜನೇ, ತ್ರೇತಾಯುಗದಲ್ಲಿ ರಾಮಾನುಜನಾದ ಲಕ್ಷ್ಮಣನಾಗಿ ಅವತ

ರಿಸಿದನು; ದ್ವಾಪರಯುಗದಲ್ಲಿ ಬಲರಾಮನಾಗಿ ಅವತರಿಸಿದನು; ಕಲಿಯುಗದಲ್ಲಿ **ಲಕ್ಷ್ಮಣಯೋಗೀಂದ್ರ** ಎಂಬ **ಯತಿರಾಜ ರಾಮಾನುಜರಾಗಿ** ಅವತರಿಸಿದನು. ಶ್ರೀ ರಾಮಾನುಜಾಚಾರ್ಯರ ವಿರಹದಿಂದ ಬಳಲಿದ್ದ ಶ್ರೀ ರಂಗನಾಥನನ್ನು ಸಂತೋಷಪಡಿಸಲು ಮತ್ತು ನಮ್ಮಾಳ್ವಾರ್ರು ಉಪದೇಶಿಸಿದ ಪ್ರಪತ್ತಿಮಾರ್ಗದ ಸತ್ಸಂಪ್ರದಾಯದ ಕಂಟಕಗಳನ್ನುದ್ಧರಿಸಿ, ಸಕಲ ಶಾಸ್ತ್ರ ತಾತ್ಪರ್ಯವಾದ **ಆಚಾರ್ಯಾಭಿಮಾನವೆಂಬ ಅಂತಿಮೋಪಾಯನಿಷ್ಠೆ**ಯನ್ನು ತಮ್ಮ ಶ್ರೀ ಸೂಕ್ತಿ ಅನುಷ್ಠಾನಗಳಿಂದ ಪ್ರಚಾರಮಾಡಲು ಸಂಕಲ್ಪಿಸಿದನು. ಶ್ರೀರಂಗಶಾಯಿಯ ದಿವ್ಯಾಜ್ಞೆಯಂತೆ ಆದಿಶೇಷನೇ ಮತ್ತೆ ಕಾನ್ತೋಪ**ಯನ್ತೃಮುನಿ**, ಅಳ. ಹಿಯಮಣವಾಳಪ್ಪೆರುಮಾಳ್ ನಾಯನಾರ್, ಎಂಬ ಆಚಾರ್ಯರಾಗಿ ಮತ್ತೆ ಅವತರಿಸಿದನು. ಅಖಿಲ ಜಗತ್ತುಗಳ ಹಿತಾನುಶಾಸನಪರನಾದ ವೇದವೇದ್ಯನಾದ ಪುರುಷೋತ್ತಮನೇ ಶ್ರೀರಂಗಶಾಯಿಯಾಗಿ ಪವಡಿಸಿದಾನೆ. ಆತನ ಅಪ್ಪಣೆಯಂತೆ ಪರಮ ಪದದಿಂದ ಎಲ್ಲರಿಗೂ ಮುಕ್ತಿಯನ್ನೀಯಲು ಭೂಲೋಕಕ್ಕೆ ಬಂದು ಅವತರಿಸಿ ವೇದಮಾರ್ಗ ಪ್ರತಿಷ್ಠಾಪನಾಚಾರ್ಯರಾಗಿ ಬೆಳಗಿದ ಶ್ರೀ ರಾಮಾನುಜಾಚಾರ್ಯರೇ ಶ್ರೀವರವರ ಮುನಿಗಳಾಗಿ ಅವತರಿಸಿದರು ಎಂದು ಅವರ ಸಮಕಾಲೀನರೆಲ್ಲರೂ ಪ್ರಶಂಸಿಸಿರುವರು:—

ಆಚಾರ ಜ್ಞಾನ ವೈರಾಗ್ಯೈರಾಕಾರೇಣ ತಾದೃಶಃ |
ಶ್ರೀರ್ಮಾ ರಾಮಾನುಜ ಸ್ಸೋಽಯಮಿತ್ಯಶಂರ್ಸ ಮಿಥಃ ಪ್ರಜಾಃ ||

ಪ್ರತ್ಯಕ್ಷವಾಗಿಯೂ ಶ್ರೀ ವರವರ ಮುನಿಗಳು ತಮ್ಮ ಆದಿಶೇಷಾಂಶವನ್ನು ಎರಡುಸಲ ಪ್ರಕಟಿಸಿರುವರು. ಒಂದು ಸಲ ಜೀಯರ್ ತಮ್ಮಮಠದಲ್ಲಿ ಮಲಗಿದ್ದಾಗ ಕೆಲವರು ಮಠಕ್ಕೆ ಬೆಂಕಿ ಹಾಕಿಬಿಟ್ಟರು. ರಾತ್ರಿಯಲ್ಲಿ ಆ ಬೆಂಕಿಯ ಧಗೆ ತಮಗೆ ತಾಗದಂತೆ, ಎಲ್ಲರೂಕಾಣುವಂತೆ, ಜೀಯರ್ ಶೇಷಾಕೃತಿಯಾಗಿ ಹೊರಗೆ ಬಂದು ಮಠಸುಡುವುದನ್ನು ಕಂಡು ವಿಷಣ್ಣರಾಗಿ ಶೋಕಾರ್ತರಾಗಿದ್ದ ಜನರ ಮಧ್ಯೆಬಂದು ನಿಂತರು. ಈ ಅದ್ಭುತವನ್ನು ಕಂಡು ಎಲ್ಲ ಶಿಷ್ಯರಿಗೂ ಸಂತೋಷವಾಯಿತು. ಇದನ್ನು ಕೇಳಿ ಆ ದೇಶದ ರಾಜ ಆ ದುಷ್ಕೃತ್ಯವನ್ನು

ಮಾಡಿದವರನ್ನು ಶಿಕ್ಷಿಸಲು ಬಯಸಿದನು. ಆಗ ಜನಕಕುಲಸುಂದರಿಯಾದಸೀತೆ ತನ್ನನ್ನು ಹಿಂಸಿಸಿದ ರಾಕ್ಷಸಿಗಳನ್ನು ಮಾರುತಿಯು ಹಿಂಸೆಯಿಂದ ಸಂರಕ್ಷಿಸಿ ದಂತೆ ಸುಂದರ ವರಮುನಿಯಾದ ಜೀಯರ್ ತಮ್ಮ ಕೃಪಾವಾತ್ಸಲ್ಯಾದಿ ಗುಣಗಳಿಂದ ಶಿಕ್ಷಿಸದಂತೆ ಅವರನ್ನು ಸಂರಕ್ಷಿಸಿದರು.

ಮತ್ತೊಂದುಸಲ ತಮ್ಮ ನಿತ್ಯಕರ್ಮಗಳನ್ನು ಮುಗಿಸಿ ಒಂದುದಿನ ಮಧ್ಯಾಹ್ನ ತಮ್ಮ ಮಠದಲ್ಲಿರುವ ಶ್ರೀಶೈಲಾರ್ಯ ಎಂಬ ವ್ಯಾಖ್ಯಾನ ಮಂಟ ಪದ ಬಾಗಿಲನ್ನು ಹಾಕಿಕೊಂಡು ಏಕಾಂತವಾಗಿ ತಕ್ಕಮಾಮಣಿವಣ್ಣನ್ (ವಾಸುದೇವ)ನಲ್ಲಿ ಮನಸ್ಸಿಟ್ಟು ಜೀಯರ್ ನಿದ್ರಾಪರವಶರಾಗಿದ್ದರು. ಆಗ ಸಂದಿನಿಂದ ನೋಡಿದ ಶಠಕೋಪಕ್ಕೊತ್ತಿ ಎಂಬ ಒಬ್ಬಾಕೆಗೆ ಸಾವಿರ ಮುಖದ ದಿಶೇಷನಂತೆ ಅವರು ತೋರಿದರಂತೆ! ಅದನ್ನು ದಿಟ್ಟಿಸುತ್ತಾ ಆಕೆ ಆಶ್ಚರ್ಯ ದಿಂದ ನಿಂತುಬಿಟ್ಟಳು. ಜೀಯರ್ ಹೊರಗೆಬಂದು ಏನಮ್ಮಾ! ಎಂದು ಆವಿಚಾರಿಸಿದಾಗ ಆಕೆ ತಾನು ಕಂಡ ನೋಟವನ್ನು ಬಿನ್ನವಿಸಿದಳು. ಆಗ ಜೀಯರ್, "ನೀನಿದನ್ನು ಯಾರಿಗೂ ಹೇಳಬೇಡ, ಎಂದರಂತೆ".

ಈ ಐತಿಹ್ಯ **ಚರಮೋಪಾಯ ನಿರ್ಣಯ**ದಲ್ಲಿ ಹೇಳಿರುವ ಮತ್ತೊಂ ದು ಸಂಗತಿಯನ್ನು ನೆನಪಿಗೆ ತರುತ್ತದೆ. ಶ್ರೀಯಾದವಾದ್ರಿ, ತಿರುನಾರಾಯಣ ಪುರಂ ಎಂಬ **ಮೇಲುಕೋಟೆ**ಯಲ್ಲಿ ಶ್ರೀ ರಾಮಾನುಜಾಚಾರ್ಯರು ನೆಲೆ ಸಿದ್ದಾಗ **ಮೊದಲಿಯಾಂಡಾನ್** ಶ್ರೀ ಯಾದವಗಿರಿ ಮಾಹಾತ್ಮ್ಯವನ್ನು ಓದು ತ್ತಿದ್ದರು. ಉತ್ತರ ಬದರಿಕಾಶ್ರಮದಲ್ಲಿ ವ್ಯಾಸಾದಿ ಮಹರ್ಷಿಗಳಿಗೆ ಶ್ರೀಮನ್ ನಾರಾಯಣನೇ ದಕ್ಷಿಣಭಾರತದಲ್ಲಿ ಆಸ್ತಿಕರಿಗೆ ಆಶ್ರಯವಾದ, ಸತ್ವೋತ್ತರ ವಾದ, ವೈಕುಂಠವರ್ಧನ ಕ್ಷೇತ್ರವಿದೆ ಎಂದು ತಿಳಿಸಿ ಅದರ ಹಿರಿಮೆಯನ್ನು ವರ್ಣಿಸುವಾಗ ಈ ಪದ್ಯ ಬರುತ್ತದೆ :–

ಅನನ್ತಃ ಪ್ರಥಮಂ ರೂಪಂ ಲಕ್ಷ್ಮಣಶ್ಚ ತತಃ ಪರಂ
ಬಲಭದ್ರಃ ತೃತೀಯಸ್ತು ಕಲೌ ಕಶ್ಚಿತ್ ಭವಿಷ್ಯತಿ.||

ಈ ಶ್ಲೋಕದ ನಾಲ್ಕನೇ ಪಾದಕ್ಕೆ ತಾತ್ಪರ್ಯವನ್ನು ತಿಳಿಸುವಂತೆ ಶಿಷ್ಯರು ಪ್ರಾರ್ಥಿಸಲು, ಅದು ರಹಸ್ಯಾಂಶವಾದ್ದರಿಂದ ಯತಿರಾಜರು ಅದು

ನಮ್ಮಾಳ್ವಾರನ್ನು ಕುರಿತು ಇರಬಹುದೆಂದು ಹೇಳಿದರು. ಆ ಉತ್ತರದಿಂದ ಅಂತರಂಗ ಶಿಷ್ಯರಿಗೆ ತೃಪ್ತಿಯಾಗಲಿಲ್ಲ. ಆದಿನ ರಾತ್ರಿ ಏಕಾಂತದಲ್ಲಿ ಈ ಐದು ಜನ ಶಿಷ್ಯರೂ ಆಚಾರ್ಯರಿಗೆ ಪ್ರಣಾಮಮಾಡಿ ಆ ಪಾದದ ರಹಸ್ಯಾರ್ಥವನ್ನು ತಿಳಿಸುವಂತೆ ಪ್ರಾರ್ಥಿಸಿದರು. ಆಗ ಅವರಿಗೆ ಯತಿರಾಜರು ಹೀಗೆ ತಿಳಿಸಿದರು:– "ಇದನ್ನು ಒಬ್ಬರಿಗೂ ಹೇಳಬೇಡಿರಿ, ಇದರಲ್ಲಿ ವಿಶ್ವಾಸ (ಪ್ರತಿಪತ್ತಿ) ಉಂಟಾಗುವುದು ದುರ್ಲಭ. "ಕಲೌ ಕಶ್ಚಿತ್ ಭವಿಷ್ಯತಿ" ಎನ್ನುವುದಕ್ಕೆ ಸರ್ವೋತ್ತಾರಕವಾದ ಜನ್ಮವನ್ನೆತ್ತಿದ ನಾವೇ ವಿಷಯ. ಆದರಿಂದ ನೀವೆಲ್ಲರೂ ನನ್ನನ್ನು ಆಶ್ರಯಿಸಿ ನಿರ್ಭರರಾಗಿರಿ, ನಿಮಗೆ ಯಾವ ಕೊರತೆಯೂ ಇಲ್ಲ". ತೊಂಡನೂರಿನಲ್ಲಿ ಶ್ರೀ ನೃಸಿಂಹ ಸನ್ನಿಧಿಯಲ್ಲಿ ತೆರೆಯ ಮರೆಯಲ್ಲಿ ಸಾವಿರ ಹೆಡೆಯ ಆದಿಶೇಷನ ರೂಪವನ್ನು ಧರಿಸಿ ವಾದಿಗಳಿಗೆ ಆಚಾರ್ಯರು ಉತ್ತರ ಹೇಳಿದುದನ್ನೂ ಇಲ್ಲಿ ಸ್ಮರಿಸಬಹುದು. ಶ್ರೀರಂಗನಾಥನೇ ಒಂದುದಿನ ತನ್ನ ಅಂತರಂಗ ಕೈಂಕರ್ಯವನ್ನು ಮಾಡುವ ಉತ್ತಮ ನಂಬಿ ಎಂಬವರಿಗೆ ತಮ್ಮ ಹಾಸಿಗೆಯನ್ನು ತೋರಿಸಿ ಹೀಗೆ ತಿಳಿಸಿದನಂತೆ:–

"ನಂಬೀ! ನಮ್ಮ ಹಾಸಿಗೆಯಾದ ಶ್ವೇತವರ್ಣದ ನಾಗರಾಜನೇ ಜೀಯರಾಗಿ ಅವತರಿಸಿ ಬಂದಿರುವನು." ಅದನ್ನು ಕೇಳಿ ನಂಬಿ ತುಂಬಾ ಅಂಜಿದವರಾಗಿ ಜೀಯರ್ ಬಳಿಗೆ ಹೋಗಿ ತಮ್ಮ ಸ್ವಪ್ನ ವೃತ್ತಾಂತವನ್ನು ತಿಳಿಸಿ ತಮ್ಮ ಅಪಚಾರಕ್ಕೆ ಕ್ಷಮೆ ಬೇಡಿದರು. ಹೀಗೆ ಶ್ರೀ ಮಧ್ವರವರಮುನಿಗಳು ದಿವ್ಯಸೂರಿಪರಿಷತ್ತಿಗೆ ಸೇರಿದ ಅನಂತನ ಅಪರಾವತಾರ, ಯತಿಪತಿಯ ಪುನರವತಾರ ವೆಂಬುದು ಅಪ್ಪಿಳ್ಳೈ ಎಂಬ ಅವರ ಶಿಷ್ಯರು ರಚಿಸಿರುವ ವಾಳಿ. ತ್ತಿರುನಾಮುಂ ಎಂಬ ಮಂಗಲಾಶಾಸನ ಪದ್ಯದಿಂದಲೂ ವ್ಯಕ್ತವಾಗುತ್ತದೆ. ಮಗುವಿಗೆ ತಂದೆ ಶ್ರೀರಂಗದ ಉತ್ಸವ ಮೂರ್ತಿಯ ಅಭಿರಾಮವರಾಧೀಶ, ಅಳಹಿಯಮಣವಾಳ ಪ್ಪೆರುಮಾಳ್ ನಾಯನಾರ್ ಎಂಬ ಹೆಸರನ್ನಿಟ್ಟರು. ಸಕಾಲದಲ್ಲಿ ಜಾತಕರ್ಮಾದಿ ಸಂಸ್ಕಾರಗಳನ್ನು ಶಾಸ್ತ್ರೋಕ್ತ ರೀತಿಯಲ್ಲಿ ಮಾಡಿದರು. ಈ ಶಿಶು ಕೊಂಚಕಾಲ ಸೋದರಮಾವನ ಮನೆಯಲ್ಲಿ ಬೆಳೆಯಿತು. ತಂದೆಯಬಳಿ ಉಪನಯನವಾದ ಮೇಲೆ ವೇದಶಾಸ್ತ್ರಾಭ್ಯಾಸವಾಯಿತು. ಆ ಮಗುವಿನ ಸೌಂದರ್ಯ ಗಾಂಭೀರ್ಯ ಸೌಹಾರ್ದವನ್ನು ಕಂಡಜನರೆಲ್ಲರೂ ಸಂತೋಷಿಸಿ ಅದನ್ನು ಪ್ರೀತಿಸಿ ರಾಮನಂತೆ ಆದರಿಸುತ್ತಿದ್ದರು. ಕಾಲಕ್ರಮ

ದಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ ಷೋಡಶ ಕಲಾಪೂರ್ಣನಾದ ಚಂದ್ರನಂತೆ ಎಲ್ಲರಿಗೂ ಆನಂದವನ್ನು ಬೀರುತ್ತಿದ್ದ ನಾಯನಾರ್‌ಗೆ 16ನೇ ವರ್ಷದಲ್ಲಿ ತಂದೆಯವರೇ ಮದುವೆ ಮಾಡಿ ನಾಲ್ಕುಸಾವಿರ ದಿವ್ಯ ಪ್ರಬಂಧವನ್ನೂ ಕಲಿಸಿದರು. ಕೊಂಚಕಾಲವಾದಮೇಲೆ ದಿವಂಗತರಾದ ತಂದೆಗೆ ಬ್ರಹ್ಮ ಮೇಧ ಸಂಸ್ಕಾರಮಾಡಿ ತಿರುವಧ್ಯಯನೋತ್ಸವವನ್ನು ನಾಯನಾರ್ ನಡೆಸಿ ಕೃತಾರ್ಥರಾದರು.

## ೨. ತಿರುವಾಯ್ಮೊಳಿ.ಪ್ಪಿಳ್ಳೈಯನ್ನು ಆಶ್ರಯಿಸುದುದು

ತಂದೆ ದಿವಂಗತರಾದ ಮೇಲೆ ನಾಯನಾರ್ ಶಿಕ್ಕಿಲ್‌ಕಿಡಾರದಿಂದ ತಿರುನಗರಿಗೆ ಬಂದು ಶ್ರೀಶೈಲೇಶರ್, ತಿರುವಾಯ್ಮೊಳಿ. ಪಿಳ್ಳೈ ಎಂಬ ಲೋಕಾ ಚಾರ್ಯರ ಶಿಷ್ಯರ ಪಾದಾರವಿಂದಗಳನ್ನು ಆಶ್ರಯಿಸಿ ಅವರ ಬಳಿ ಸಂಸಾರ ಬಂಧವನ್ನು ಕಳೆಯುವ ಸಮಸ್ತ ದಿವ್ಯಪ್ರಬಂಧಗಳ ತಾತ್ಪರ್ಯವನ್ನೂ ಕಲಿ ತರು. ಚಾರ್ಯರೇ ತಮಗೆ ಶೇಷಿ, ಸ್ವಾಮಿ, ಒಡೆಯ, ಶರಣ್ಯ ಮತ್ತು ಪ್ರಾಪ್ಯವೆಂದು ನಾಯನಾರ್ ನಂಬಿ ಚರಮಪರ್ವನಿಷ್ಠರಾಗಿ ತದೇಕ ನಿಷ್ಠ ರಾಗಿದ್ದರು. ಅದರಿಂದ ಪಿಳ್ಳೈಗೆ ಬಹು ಸಂತೋಷವಾಯಿತು. ಅವರು "ಶ್ರೀ ರಾಮಾನುಜಾಚಾರ್ಯರ ಸಿರಿಯಡಿಗಳೇ ನಿಮಗೆ ಉಪಾಯ ಮತ್ತು ಉಪೇಯ" ಎಂದು ಏಕಾನ್ತದಲ್ಲಿ ಉಪದೇಶಿಸಿ ತಾವು ದಿನವೂ ಪೂಜಿಸು ತ್ತಿದ್ದ ಉಡೈಯವರ್ (ಶ್ರೀಭಾಷ್ಯಕಾರ)ವಿಗ್ರಹವನ್ನು ಪೂಜಿಸಲು ಕೊಟ್ಟರು. ಆ ಮೂರ್ತಿಯನ್ನು ಸದಾ ಆರಾಧಿಸುತ್ತಾ ತನ್ನಿಷ್ಠರಾಗಿ ರಾಮಾನುಜ ನೂತ್ತಂದಾದಿಯನ್ನು ಅನುಸನ್ಧಾನಮಾಡುತ್ತಾ ಇದ್ದರು. ತತ್‌ಫಲವಾಗಿ ಯತಿರಾಜರಲ್ಲಿ ಇವರಿಗೆ ವಿಶೇಷ ಪ್ರಾವಣ್ಯವುಂಟಾಯಿತು; ಆದುದರಿಂದ ಇವರಿಗೆ ಯತೀನ್ದ್ರಪ್ರವಣರು ಎಂದೇ ಹೆಸರಾಯಿತು. ಪ್ರಸನ್ನಗಾಯತ್ರೀ ಎಂಬ ಈ ನೂತ್ತಂದಾದಿಯ ಸಾರವೇ ಇವರ ಯತಿರಾಜ ವಿಂಶತಿ ಎಂಬ ಲಲಿತ ವಾದ ಸ್ತೋತ್ರ.

ಶ್ರೀಮನ್ಯತೀನ್ದ್ರ! ತವ ದಿವ್ಯ ಪದಾಬ್ಜ ಸೇವಾಂ|
ಶ್ರೀಶೈಲನಾಥ ಕರುಣಾ ಪರಿಣಾಮದತ್ತಾಂ ||

ತಾಮನ್ವಹಂ ಮಮ ವಿವರ್ಧಯ ! ನಾಥ ತಸ್ಯಾಃ |
ಕಾಮಂ ವಿರುದ್ಧ ಮಖಿಲಂ ಚ ನಿವರ್ತಯ ತ್ವಂ ||

ಎಂಬ ಇದರ ಪದ್ಯದಿಂದಲೇ ಯತಿರಾಜವಿಂಶತಿ "ಆಳ್. ವಾರ್‌ತಿರು ನಹರಿ ಎಂಬೆರುಮಾನಾರ್"ಗೆ ಅಂಕಿತವಾಗಿದೆ ಎಂಬುದು ವ್ಯಕ್ತವಾಗುತ್ತದೆ. ಈ ಸ್ತೋತ್ರವನ್ನು ಪಿಳ್ಳೈ ಕೇಳಿ ತುಂಬಾ ಆನಂದಿಸಿದರು. ಸಚ್ಛಿಷ್ಯ ಲಕ್ಷಣ ಗಳೆಲ್ಲಾ ತುಂಬಿದ್ದ ನಾಯನಾರ್‌ಗೆ ಅವರ ಸೌಕುಮಾರ್ಯಕ್ಕೆ ತಕ್ಕಂತೆ ಊಟ ಮೊದಲಾದ ಉಪಚಾರಗಳೆಲ್ಲವೂ ಸರಿಯಾಗಿ ನಡೆಯುವಂತೆ ಶ್ರೀ ಶೈಲೇಶರು ಏರ್ಪಾಟುಮಾಡಿದ್ದರು. ಒಮ್ಮೆ ಅವರು ಇಂತೆಂದರಂತೆ :– "ನಾಯನಾರ್ ನಿಮ್ಮಂತೆ ಒಬ್ಬರನ್ನು ಕಾಣದೆ ಇದ್ದುದರಿಂದ ನಾವು ಅರ್ಚಾವತಾರದಲ್ಲಿ ಮಗ್ನ ರಾದೆವು"·ತಿರುವಾಯ್ಮೊಳಿ. ಪ್ಪಿಳ್ಳೈ ನಾಯನಾರಿಗೆ ಭಗವದ್ವಿಷಯಂ, ಈಡು ಮುಪ್ಪ ತ್ತಾರಾಯಿರಂ ಎಂಬ ತಿರುವಾಯ್ಮೊಳಿ. ವ್ಯಾಖ್ಯಾನ ರತ್ನವನ್ನು ಉಪ ದೇಶಿಸಿದರು.

ನಾಯನಾರಿಗೆ ಇಬ್ಬರು ಗಂಡು ಮಕ್ಕಳಾದರು; ಅವರಿಗೆ ಆಚಾರ್ಯರ ಅಪ್ಪಣೆಯಂತೆ ರಾಮಾನುಜನ್, ವಿಷ್ಣುಚಿತ್ತನ್ ಎಂದು ನಾಮಕರಣ ವಾಯಿತು. ಹಿರಿಯ ಪುತ್ರನ ಹಿರಿಯಮಗನೇ ಆಚಾರ್ಯ ಪೌತ್ರರಾದ ಅಭಿ ರಾಮವರಾಧಿಪ ಎಂಬ ಜೀಯರ್ ನಾಯನಾರ್. ರಾಮಾನುಜರಿಗೆ ಪಿಳ್ಳಾನ್ (ಕುರುಕೇಶ)ರಂತೆ ಯತೀನ್ದ್ರ ಪ್ರವಣರಿಗೆ ಜೀಯರ್ ನಾಯನಾರ್, ಇಳವ ರಶು; ಮುಂದೆ ಇವರೇ ಉತ್ತರಾಧಿಕಾರಿಯಾದರು.

ತಿರುವಾಯ್ಮೊಳಿ. ಪಿಳ್ಳೈ ಅನ್ತಿಮಕಾಲ ಸಮೀಪಿಸಿತು. ಆಗ ನಾಯ ನಾರ್ ಅವರ ಪಾದಗಳನ್ನು ಮುಟ್ಟಿ ಹೀಗೆ ಶಪಥಮಾಡಿದರು:– "ಆಳ್ವಾರುಗಳ ದಿವ್ಯ ಪ್ರಬಂಧಗಳಲ್ಲಿ ರುಚಿ ವಿಶ್ವಾಸಗಳನ್ನಿಟ್ಟು ಅವುಗಳನ್ನು ಬೆಳೆಸಿಕೊಂಡು ಬರುವೆನು, ತಮಗೂ ರಾಮಾನುಜಾಚಾರ್ಯರಿಗೂ ಸಂತೋಷವಾಗುವಂತೆ ತಿರುವಾಯ್ಮೊಳಿ. ಮೊದಲಾದ ದಿವ್ಯಪ್ರಬಂಧಗಳಿಂದ ಸದಾ ಕಾಲಕ್ಷೇಪ ಮಾಡುತ್ತಾ ಹಿಂದಿನವರಂತೆ ಶ್ರೀರಂಗದಲ್ಲಿ ಶ್ರೀರಂಗನಾಥನಿಗೆ ಮಂಗಳಾ ಶಾಸನ ಮಾಡುತ್ತಾ ನಿತ್ಯ ವಾಸಮಾಡುವೆನು". ಆಚಾರ್ಯರಿಗೆ ಕೊಟ್ಟ

ಮಾತನ್ನು ಶ್ರದ್ಧೆಯಿಂದ ನಡೆಯಿಸಿ ನಾಯನಾರ್ ಅವರ ಅಳಲನ್ನುನೀಗಿ ಕೃತ ಕೃತ್ಯರಾದರು. ಈ ಸಂದರ್ಭದಲ್ಲಿ ರಾಮಾನುಜಾಚಾರ್ಯರು ಶ್ರೀ ಆಳವಂದಾರ್ ಚರಮವಿಗ್ರಹವನ್ನು ಸಂದರ್ಶಿಸಿ ಅವರ ಮನದಲ್ಲಿದ್ದ ಮೂರು ಅಭೀಷ್ಟಗಳನ್ನರಿತು ಅವುಗಳನ್ನು ಪೂರೈಸುವುದಾಗಿ ಮಾಡಿ ಅದನ್ನು ನೆರವೇರಿಸಿ ವಿಶಿಷ್ಟಾದ್ವೈತ ಸಿದ್ಧಾಂತ ನಿರ್ಧಾರಣಧುರೀಣರಾದ ಸಂಗತಿ ನೆನಪಿಗೆ ಬರುತ್ತದೆ.

ಪಿಳ್ಳೈ ಸ್ವಾಚಾರ್ಯರಾದ ಲೋಕಾಚಾರ್ಯರ ಸಿರಿಯಡಿಗಳನ್ನು ಧ್ಯಾನಿಸುತ್ತಾ ವೈಶಾಖ ಬಹುಳ ಅಷ್ಟಮೀದಿನ ಸಿರಿನಾಡನ್ನು ಅಲಂಕರಿಸಿದರು, ದಿವಂಗತರಾದರು. ನಾಯನಾರ್ ಮೊದಲಾದ ಶಿಷ್ಯರೆಲ್ಲರೂ ಆಚಾರ್ಯ ವಿಶ್ಲೇಷವನ್ನು ಸಹಿಸಲಾರದೆ ಅತ್ಯಂತ ಆರ್ತಿಯಿಂದಕ್ಲೇಶಿಸಿ, ಸಮಾಧಾನಮಾಡಿಕೊಂಡು, ಅವರಿಗೆ ಬ್ರಹ್ಮಮೇಧ ಸಂಸ್ಕಾರವನ್ನು ಮಾಡಿ, ಅವರ ವೈಭವಾನುಗುಣವಾಗಿ ತಿರುವಧ್ಯಯನ ಮಹೋತ್ಸವವನ್ನು ನಡೆಸಿ ಶ್ರೀವೈಷ್ಣವತದೀಯಾರಾಧನವನ್ನು ಮಾಡಿದರು. ಪ್ರತಿವರ್ಷವೂ ಆಚಾರ್ಯರ ತೀರ್ಥ ದಿನವನ್ನು ಆಚರಿಸುತ್ತಿದ್ದರು. ದಿನವೂ ನಾಯನಾರ್ ಅವರ ಅಪ್ಪಣೆಯಂತೆ ತಿರುವಾಯ್ಮೊಳಿ. ಮೊದಲಾದ ದಿವ್ಯ ಪ್ರಬಂಧಗಳನ್ನು ವ್ಯಾಖ್ಯಾನದೊಡನೆ ಅನುಸಂಧಾನಮಾಡುತ್ತಿದ್ದರು. ಹೀಗೆ "ಆಳ್ವಾರ್ ತಿರುನಗರಿ" ಯಲ್ಲಿ ನಾಯನಾರ್ ನಮ್ಮ ರಾಮಾನುಜದರ್ಶನದ ವಿಲಕ್ಷಣವಾದ ಪ್ರಮಾತೃಪ್ರಮೇಯ ಪ್ರಮಾಣ ತತ್ಪರರಾಗಿ, ದರ್ಶನ ಪ್ರವರ್ತಕರಾಗಿ, ನೆಲೆಸಿದ್ದ ಕಾಲದಲ್ಲಿ ಅವರ ವೈಭವವನ್ನು ಕೇಳಿ ಅಳ.ಹಿಯಮಣವಾಳ ಪೆರಮಾಳ್ ಸೇನೈ ಮುದಲಿಯಾರಣ್ಣರ್ ಮೊದಲಾದವರು ಬಂದು ಅವರ ಸಿರಿಯಡಿಗಳನ್ನು ಆಶ್ರಯಿಸಿದರು. ಅವರಲ್ಲಿ ಅಳ. ಹಿಯವರದರ್ ಮಹಾವಿರಕ್ತರಾಗಿ, ಸರ್ವಸಂಗ ಪರಿತ್ಯಾಗಮಾಡಿ, ಸನ್ಯಾಸಿಗಳಾಗಿ ಶ್ರೀ ರಾಮಾನುಜ ಜೀಯರ್ ಎಂಬ ಸಿರಿನಾಮದಿಂದ ನಾಯನಾರಿಗೆ ಪಾದರೇಖಾ ಸಮರಾಗಿ ಒಡನಿದ್ದು ಅವರ ನಿತ್ಯ ಸೇವೆ ಮಾಡುತ್ತಾ ಬಂದರು.

## ೩. ಶ್ರೀರಂಗವಾಸ

ಕೊಂಚ ಕಾಲವಾದಮೇಲೆ ಶ್ರೀರಂಗದಲ್ಲಿ ನಿತ್ಯವಾಸ ಮಾಡಲು ಸಂಕಲ್ಪಿಸಿ ನಾಯನಾರ್ ತಮ್ಮ ಅಂತರಂಗಶಿಷ್ಯರೊಡನೆ ಶ್ರೀ ವಿಲ್ಲಿ

ಪುತ್ತೂರಿಗೆ ಹೋಗಿ ಗೋದಾದೇವಿಯನ್ನು ನಮಿಸಿ ಸುತಿಸಿ, ಅಲ್ಲಿಂದ ವನಗಿರಿ ಎಂಬ ತಿರುಮಾಲಿರುಂ ಶೋಲೈ ಬೆಟ್ಟಕ್ಕೆ ಹೋಗಿ ಅಲ್ಲಿರುವ ಸುಂದರ ಬಾಹುವಿನ ಚೆಲುವನ್ನು ಅನುಭವಿಸಿ, "ವಿಜ್ಞಾಪನಾಂ ವನಗಿರೀಶ್ವರ" ಎಂಬ ಕೂರನಾಥರ ಶ್ಲೋಕವನ್ನು ಅನುಸಂಧಾನಮಾಡಿ ಶ್ರೀರಂಗವನ್ನು ಸೇರಿದರು. "ಕಾವೇರೀವಿರಜಾಸೇ(ಯಂ" ಎಂದು ಪ್ರಖ್ಯಾತವಾಗಿರುವ, ಗಂಗೆಗಿಂತ ಪವಿತ್ರವಾದ, ಕಾವೇರೀ ನದಿಯಲ್ಲಿ ನಾಯನಾರ್ ಸ್ನಾನಮಾಡಿ ಮಡಿಯುಟ್ಟು ಹನ್ನೆರಡು ಸಿರಿನಾಮಗಳನ್ನು, ತಿರುಮಣ್‌ಕಾಪ್ಪು, ಧರಿಸಿಕೊಂಡು ಶ್ರೀರಂಗ ಕ್ಷೇತ್ರಕ್ಕೆ ನಮಿಸುತ್ತಿರುವಾಗ ಶ್ರೀರಂಗರಾಜನ ಪರಿವಾರವೆಲ್ಲಾ ದೇವಾಲಯದ ಸಮಸ್ತ ಮರ್ಯಾದೆಗಳೊಡನೆ ಬಂದು ಅವರನ್ನು ಎದಿರುಗೊಂಡು ಸ್ವಾಗತಿಸಿತು. ಅವರಿಗೆಲ್ಲಾ ನಮಿಸಿ ಅವರೊಡನೆ ನಾಯನಾರ್ ಶ್ರೀರಂಗದ ಪ್ರಕೃತಿ ಸೌಂದರ್ಯವನ್ನೂ ತಿರುವೀಧಿ ಪ್ರಕಾರ ಗೋಪುರಾದಿಗಳ ಅಂದವನ್ನೂ ನೋಡಿ ನಲಿಯುತ್ತಾ ಪಿಳ್ಳೈ ಲೋಕಾಚಾರ್ಯರ ಶಿಷ್ಯರಾದ ಕೋಟ್ಟೂರಿಲಣ್ಣರ್ ತಿರುಮಾಳಿಗೆಗೆ ಹೋಗಿ ತಂಗಿದರು. ಅಣ್ಣರ್ ಆತ್ಯಾದರದಿಂದ ಅವರನ್ನು ಕಂಡು ಅವರಿಗೆ ದೇವರ ಸೇವೆ ಮಾಡಿಸಲು ದೇವಸ್ಥಾನದ ಅರ್ಚಕರ ಮನೆಗೆ ಕರೆದುಕೊಂಡು ಹೋದರು. ಅರ್ಚಕರು ಇವರಿಬ್ಬರಿಗೂ ನಮಿಸಿ ತಿರುವಾಯ್ಮೊಳಿಯಲ್ಲಿ ಒಂದು ಪದ್ಯಕ್ಕೆ "ಈಡು" ವ್ಯಾಖ್ಯಾನವನ್ನನುಸರಿಸಿ ತಾತ್ಪರ್ಯವನ್ನು ತಿಳಿಸುವಂತೆ ಪ್ರಾರ್ಥಿಸಿದರು. ಆಗ ನಾಯನಾರ್ ಆಳ್ವಾರ್ ವೈಭವವನ್ನು ಐತಿಹ್ಯವಾಗಿ ಪ್ರತಿಪಾದಿಸುವ ಒಂದು ಪದ್ಯವನ್ನು ಕುರಿತು ಅದ್ಭುತವಾಗಿ ಉಪನ್ಯಾಸ ಮಾಡಿದರು. ಅದನ್ನು ಕೇಳಿ ಅರ್ಚಕರಿಗೆ ಬಹು ಸಂತೋಷವಾಯಿತು; "ಮುಪ್ಪತ್ತಾರಾಯಿರ ಪೆರುಕ್ಕರ್" ಎಂದು ಕೊಂಡಾಡಿ ನಾಯನಾರ್, ಅಣ್ಣರನ್ನು ದೇವರ ಸೇವೆಗೆ ತಮ್ಮ ಪರಿಜನರೊಡನೆ ಕಳುಹಿಸಿಕೊಟ್ಟರು. ನಾಯನಾರ್ ಮೊದಲು ಶ್ರೀ ರಾಮಾನುಜಾಚಾರ್ಯರನ್ನೂ, ಆಮೇಲೆ ನಮ್ಮಾಳ್ವಾರ್‌ರನ್ನೂ, ಬಳಿಕ ಶ್ರೀ ರಂಗನಾಯಕಿಯನ್ನೂ ಸಂದರ್ಶಿಸಿ ಒಳಗಿನ ಪ್ರಾಕಾರಕ್ಕೆ ಹೋದರು. ಅಲ್ಲಿರುವ "ವೇದಶೃಂಗಂ ಮಹಾದ್ಭುತಂ" ಎಂಬ ಪ್ರಣವಾಕಾರ ವಿಮಾನಕ್ಕೆ ಕೈಮುಗಿದು, ವಿಷ್ವಕ್ಸೇನರಿಗೆ ವಂದಿಸಿ, ಅಳ. ಹಿಯಮಣವಾಳನ್ ತಿರುಮಂಡಪಂ ಎಂಬ ಮಂಟಪದ ಬಳಿ

ಆಳಿ.ವಣ್ಣ ! ನಿನ್ನಡಿಯಿಣೈಯಡೈಂ ದೇೞ, ಅಣಿಪೊಳಿ.ಲ್ ತಿರುವರಂಗತ್ತ ಮ್ಮಾನೇ, ಎಂದು ಹೇಳಿ ಸಾಷ್ಟಾಂಗ ಪ್ರಣಾಮ ಮಾಡಿದರು.

ವೈನತೇಯನನ್ನೂ ದ್ವಾರಪಾಲಕರನ್ನೂ ವಂದಿಸಿ ಅವರ ಅನುಮತಿ ಯೊಡನೆ ಒಳಗೆ ಹೋಗಿ ಆಮೋದಸ್ತಂಭದ (ತಿರುಮಣತ್ತೂಣ್) ಪಕ್ಕದಲ್ಲಿ ನಿಂತು ಶ್ರೀರಂಗದಲ್ಲಿ ಶೇಷಶಯನದ ಮೇಲೆ ಪವಡಿಸಿರುವ ಮೂರ್ತಿಯನ್ನೂ ಉತ್ಸವ ಮೂರ್ತಿಯನ್ನು ಶ್ರೀ ಕುಲಶೇಖರಾಳ್ವಾರ್ ಹಾಡಿರುವಂತೆ ಬಾಯಾರ ನುತಿಸಿ, ಕಣ್ಣಾರಕಂಡು ಕೈ ಮುಗಿದು, "ಅಮಲನಾದಿಪಿರ್ರಾ" ಪ್ರಬಂಧವನ್ನು ಅನುಸಂಧಾನ ಮಾಡುತ್ತಾ ಆಪಾದಚೂಡವಾಗಿ ಅನುಭವಿಸಿ ತಿರುಪ್ಪ ಲ್ಲಾಂಡು ಪ್ರಬಂಧವನ್ನು ಹಾಡಿ ಆಮೇಲೆ ಪೂರ್ವಾಚಾರ್ಯರುಗಳ ಶ್ರೀ ಸೂಕ್ತಿ ಗಳನ್ನು ಪಠಿಸುತ್ತಾ ಆನಂದ ಪರವಶರಾದರು. ನಿತ್ಯ ದರಿದ್ರನಿಗೆ ನಿಧಿ ಯನ್ನು ಕಂಡಂತಾಯಿತು. ನಮ್ಮ ಹಿರಿಯರ ಕುಲಧನವೂ ಶ್ರೀನಿಧಿಯೂ ಕರುಣಾನಿಧಿಯೂ ಆದ, ಸರ್ವಲೋಕಗಳಿಗೂ ತಾಯಿಯೂ ತಂದೆಯೂ ಸರ್ವ ವಿಧ ಬಂಧುವೂ ಆದ, ಭಗವಂತನು ದೇಶಾಂತರಕ್ಕೆ ಹೋಗಿಬಂದ ಮಗನಂತೆ ಇವರನ್ನು ಕಂಡು ತನ್ನ ಸುಪ್ರಸನ್ನ ವದನ–ಮಂದಸ್ಮಿತ–ಕರುಣಾಪೂರ್ಣಾವ ಲೋಕನಗಳಿಂದ ಅನುಗ್ರಹಿಸಿ ರಾಮಾನುಜರಂತೆ ವಿಷಯೀಕರಿಸಿದನು. ದೇವರ ತೀರ್ಥ ಪ್ರಸಾದಗಳನ್ನು ಸ್ವೀಕರಿಸಿ ಅಣ್ಣರ್ ತಿರುಮಾಳಿಗೆಗೆ ಹಿಂತಿರುಗಿ ಅಲ್ಲಿ ಅರ್ಚಕರು ಅನೇಕ ಪದಾರ್ಥಗಳನ್ನು ಕಳುಹಿಸಿ ಮಾಡಿಸಿದ್ದ ಪದಾರ್ಥ ಗಳನ್ನೆಲ್ಲಾ ಭಗವಂತನಿಗೆ ನಿವೇದಿಸಿದ ಮೇಲೆ ನಾಯನಾರ್ ದ್ವಯಾನು ಸಂಧಾನ ಪೂರ್ವಕ ಅಣ್ಣರ್ ಜೊತೆಯಲ್ಲಿ ಭೋಜನ ಮಾಡಿದರು. ಆ ಮೇಲೆ ಅಣ್ಣರ್ ಹೇಳಿದ ಪೂರ್ವಾಚಾರ್ಯರ ಉಪದೇಶಾನುಷ್ಠಾನಗಳನ್ನು ಕೇಳುತ್ತಾ ಅವರೊಡನೆ ಪೂರ್ವಾಚಾರ್ಯರ ತಿರುಮಾಳಿಗೆಗೆ ಹೋಗಿ ಸಂದರ್ಶಿಸಿ ವಂದಿಸಿದರು. "ವಾಳಿ. ಯುಲಹಾಶಿರಿಯರ್" ಎಂಬ ತನಿಯನ್ ಎಂಬ ಪದ್ಯವನ್ನೂ, ಮಣವಾಳ ಮನಮುಯ್ರೆತ್ತಾರ್ ವಾಳಿ ಎಂಬ ಪದ್ಯವನ್ನೂ ಹಾಡಿ ಶ್ರೀಕೃಷ್ಣಪಾದರ ಮಕ್ಕಳಾದ ಲೋಕಾಚಾರ್ಯರ್, ಅಳ. ಹಿಯ ಮಣವಾಳಪ್ಪೆರುಮಾಳ್ ನಾಯನಾರ್ ಇಬ್ಬರಿಗೂ ಮಂಗಳಾಶಾಸನ ಮಾಡಿದರು.

ಯಸ್ಯಾಯಂ ಕುಲದೈವತಂ ರಘುಪತೇರಾರಾಧನಂ ಶ್ರೀಸಖಃ
ಕಾವೇರಿ ಸರಿದನ್ತರೀಪನಗರೀ ವಾಸಸ್ಥಲೀ ಪುಣ್ಯಭೂಃ||
ಕೃಷ್ಣೋಮಾನ್ಯಗುರುಃ ವರೇಣ್ಯಮಹಿಮಾ ವೇದಾನ್ತವಿದ್ಯಾನಿಧಿಃ
ಭ್ರಾತಾಸೌಮ್ಯವರಃ ಸ್ವಯಂತುಭುವನಾಚಾರ್ಯೋಸಿ ಕಸ್ತೇಸಮಃ||

ಎನ್ನುವಂತೆ ಅವರ ಅನುಪಮವಾದ ಹಿರಿಮೆಯನ್ನು ಅಣ್ಣರ್ ಬಾಯಿಂದ ಕೇಳಿ ಸುಪ್ರೀತರಾದರು. ಒಂದು ದಿನ ದೇವರಸೇವೆಗೆ ಹೋಗಿದ್ದಾಗ ಶ್ರೀ ರಂಗನಾಥನು ನಾಯನಾರಿಗೆ ಇಂತು ಅಪ್ಪಣೆ ಮಾಡಿದನು. "ನಮ್ಮ ರಾಮಾನುಜರಂತೆ ನೀವೂ ನಮ್ಮ ಮಂದಿರದ ಕಾರ್ಯವನ್ನೂ ದರ್ಶನರಹಸ್ಯಗಳನ್ನೂ ಆರೈದು ನೋಡಿಕೊಂಡು ನಿಮ್ಮ ಶರೀರಾವಸಾನದವರೆವಿಗೆ ಇಲ್ಲಿಯೇ ಇರಿ."

"ಮಹಾ ಪ್ರಸಾದಂ" ಎಂದು ಆ ದಿವ್ಯಾಜ್ಞೆಯನ್ನು ಶಿರಸಾವಹಿಸಿ ನಾಯನಾರ್ ಶ್ರೀ ರಂಗದಲ್ಲಿದ್ದ ರಹಸ್ಯಗ್ರಂಥಗಳೆನ್ನೆಲ್ಲಾ ಪರಿಶೀಲಿಸಿ ಜೀರ್ಣೋದ್ಧಾರ ಮಾಡಿ ಅವುಗಳನ್ನು ಪ್ರಕಾಶಪಡಿಸುತ್ತಿದ್ದರು. ತಮ್ಮ ಮಂಗಳಾಶಾಸನದ ಪ್ರಭಾವದಿಂದ ದೇವಾಲಯದ ಕಾರ್ಯನಿರ್ವಾಹಕರಾದಉತ್ತಮನಂಬಿಯನ್ನು ತಿದ್ದಿ ಭಗವಂತನಿಗೆ ಯಾವ ಕೊರತೆಯೂ ಇಲ್ಲದಂತೆ, ಹಿಂದಿನಂತೆ ಆರಾಧನೆ ತಳಿಗೆ ಮೊದಲಾದ ಉಪಚಾರಗಳು ನಡೆಯುವಂತೆ, ಏರ್ಪಡಿಸಿದರು. ಆಮೇಲೆ ಶ್ರೀರಂಗದಿಂದ ಹೊರಟು ನಾಯನಾರ್ ತಿರುವೆಳ್ಳರೈ (ಶ್ವೇತಗಿರಿ) ತಿರುಕ್ಕೋವಲೂರ್ ಮಾರ್ಗವಾಗಿ ಉತ್ತರ ದೇಶಯಾತ್ರೆಯನ್ನು ಕೈಗೊಂಡರು.

## ೪. ಉತ್ತರದೇಶ ಯಾತ್ರೆ

ತಿರುಪತಿ ಶ್ರೀನಿವಾಸನನ್ನೂ ಕಾಂಚೀಪುರದ ಶ್ರೀವರದರಾಜಸ್ವಾಮಿಯನ್ನೂ ಸೇವಾಕ್ರಮದಲ್ಲಿ ಸಂದರ್ಶಿಸಿ ಕಾಂಚೀಪುರದ ತಿರುವೆಃಕಾ ಮೊದಲಾದ ದಿವ್ಯದೇಶಗಳಿಗೂ ಹೋಗಿ ಮಂಗಲಾ ಶಾಸನಮಾಡಿದರು. ಶ್ರೀಪೆರುಂಬೂದೂರಿಗೆ ಹೋಗಿ "ಯೋನಿತ್ಯಂ" ಎಂದು ಆರಂಭಿಸಿ "ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ" ಎಂದು ಅನುಸನ್ಧಾನ ಮಾಡಿ ಸಾಷ್ಟಾಂಗ ಪ್ರಣಾಮಾಡಿ ಶ್ರೀ ರಾಮಾನುಜರ ದಿವ್ಯ ಮಂಗಳವಿಗ್ರಹವನ್ನು ಸಂದರ್ಶಿಸಿ

"ಶೀರಾರು ಮೆತಿರಾಶರ್" ತಿರುವಡಿಹಳ್ ವಾಳಿಯೇ...ಇನಿದಿರುಪ್ಪೋಡೆಳಿ.ಲ್ ಜ್ಞಾನ ಮುದ್ದಿರೈವಾಳಿಯೇ ಎಂದು ಹಾಡಿ ಮಂಗಲಾ ಶಾಸನಮಾಡಿ ಶ್ರೀಭಾಷ್ಯ ವನ್ನು ಕಲಿಯಲು ಅನುಮತಿ ಪಡೆದು ಕಾಂಚೀಪುರಕ್ಕೆ ಮರಳಿ ಬಂದು ಅಲ್ಲಿ ಕೊಂಚ ಕಾಲವಿದ್ದು ಕಿಡಾಂಬಿಯಾಚ್ಚಾರ್ ವಂಶ್ಯರಾದ ಕಿಡಾಂಬಿನಾಯನಾರ್ ಎಂಬವರನ್ನು ಆಶ್ರಯಿಸಿ ಅವರ ಬಳಿ ಶ್ರೀ ಭಾಷ್ಯವನ್ನು ಕೇಳುತ್ತಾ ಶ್ರೀ ದೇವ ರಾಜನ ಮಂಗಲಾಶಾಸನವನ್ನು ಮಾಡುತ್ತಿದ್ದರು. ಶ್ರೀಭಾಷ್ಯವನ್ನು ಅಧಿಕರಿಸಿದ ಮೇಲೆ "ಶೆಂದಮಿಳು.ವಡಕಲೈಯುಂ ತಿಹಳ್.ನ್ದ ನಾವರ್"ಎನ್ನು ವಂತೆ ನಾಯನಾರ್ ಉಭಯವೇದಾನ್ತಾಚಾರ್ಯರಾಗಿ ಬೆಳಗಿದರು.

ಕಾಂಚೀಪುರದ ಯಥೋಕ್ತಕಾರಿ ಸನ್ನಿಧಿಯಲ್ಲೂ ಶ್ರೀಪೆರುಂಬೂದೂರಿ ನಲ್ಲೂ ನಾಯನಾರ್ ಶ್ರೀಭಾಷ್ಯ ಪ್ರವಚನ ಮಾಡಿದರೆಂದು ತಿಳಿದು ಬರು ತ್ತದೆ. ಶ್ರೀ ವರದರಾಜ ಸ್ವಾಮಿಯ ಅಪ್ಪಣೆ ಪಡೆದು, ಕಾಂಚೀಪುರದಲ್ಲಿದ್ದ ಗ್ರಂಥಗಳನ್ನೆಲ್ಲಾ ಶೇಖರಿಸಿಕೊಂಡು ನಾಯನಾರ್ ಶ್ರೀರಂಗಕ್ಕೆ ಹಿಂತಿರುಗಿ ಶ್ರೀ ರಂಗನಾಥನ ಕೈಂಕರ್ಯಶ್ರೀಯೊಡನಯೂ ಶ್ರೀವೈಷ್ಣವ ಸಮೃದ್ಧಿ ಯೊಡನೆಯೂ ರಂಗಮಂಗಳಧುರ್ಯರಾಗಿ ದರ್ಶನವನ್ನು ನಿರ್ವಹಿಸುತ್ತಿದ್ದರು.

## ೫. ಸನ್ಯಾಶ್ರಮ ಸ್ವೀಕಾರ

ಅವರಿಗೆ ತುಂಬಾ ಜ್ಞಾತಿಗಳೂ ನೆಂಟರೂ ಇದ್ದರು. ಒಂದು ದಿನ ದೇವರ ಸೇವೆಗೆ ವಿರುದ್ಧವಾದ ಆಶೌಚತಿಳಿದು ಬಂದ ಒಡನೇ ಶ್ರೀರಂಗನಾಥನ ಪಾದಾರ ವಿಂದಗಳಲ್ಲಿ ಆಸಕ್ತವಾಗಿದ್ದ ಮನಸ್ಸಿದ್ದ ಅವರಿಗೆ ಭಗವದ್ವಿಶ್ಲೇಷ ಅಸಹ್ಯವಾ ಯಿತು. ಭಗವಂತನ ಚರಣಾರವಿಂದಗಳಲ್ಲಿ ಪ್ರವಣರಾದವರಿಗೆ ಗೃಹಕ್ಷೇತ್ರ ಬಂಧು ಮೊದಲಾದವೆಲ್ಲಾ ಪ್ರತಿಕೂಲವಾಗಿ ತೋರುವುದರಿಂದ ನಾಯನಾರ್ ಪರ್ಯಾಲೋಚಿಸಿ ತಮ್ಮ ಸಬ್ರಹ್ಮಚಾರಿಗಳಾದ ಶ್ರೀಶಠಕೋಪಜೀಯರ್ ಎಂಬವರ ಬಳಿ ಹೋಗಿ,ಆಶ್ರಮಗಳಲ್ಲಿ ಉತ್ತುಂಗವಾದ (ತುರೀಯ) ಸನ್ಯಾಸಾಶ್ರಮವನ್ನು ಸ್ವೀಕರಿಸಿದರು. ತಿರುವಾಯ್ಮೊಳಿ. ಪ್ಪಿಳ್ಳೈ ಎಂಬ ಆಚಾರ್ಯರ ಸಿರಿನಾಮಮನ್ನು ಮುಂದಿಟ್ಟು "ಶ್ರೀ ಶಠಕೋಪಜೀಯರ್ ಎಂದು ಹೆಸರನ್ನು ಯತ್ಯಾಶ್ರಮಿಯಾದಾಗ ನಾಯನಾರಿಗೆ ಕೊಟ್ಟರು.

ಆದರೆ ಶ್ರೀರಂಗರಾಜನು ಮಂಗಲಾಶಾಸನಕ್ಕೆ ಹೋದಾಗ ಇವರನ್ನು ಸತ್ಕರಿಸಿ ಹೀಗೆ ಅಪ್ಪಣೆ ಮಾಡಿದನು:—

"ನಮ್ಮ ಹೆಸರಾದ ನಿಮ್ಮ ಹಿಂದಿನ ಹೆಸರನ್ನೇ ಕೊನೆಯವರೆಗೂ ಬಳಸಿರಿ" ಆದುದರಿಂದ ಅಳ.ಹಿಯಮಣವಾಳ ಪ್ಪೆರುಮಾಳ್ ನಾಯನಾರ್ ಎಂಬ ಹೆಸರು ಮಣವಾಳಮಾಮುನಿ, ವರವರಮುನಿ, ಸೌಮ್ಯೋಪಯನ್ತೃಮುನಿ, ರಮ್ಯಜಾಮಾತೃಮುನಿ, ಪೆರಿಯಜೀಯರ್, ಯತೀನ್ದ್ರಪ್ರವಣರ್ ಎಂಬಹೆಸರು ಇವರಿಗ್ಗೆ ಸ್ಥಿರವಾಗಿ ನಿಂತಿತು. ಇವರಿಗೆ ಪಲ್ಲವರಾಯನ ಮಠವನ್ನು ವಾಸಕ್ಕೆ ಕೊಟ್ಟು "ಯತೀಶ್ವರರಾದ ರಾಮಾನುಜರಂತೆ ನಿಮ್ಮ ಶರೀರಾವಸಾನದವರೆಗೊ ಇಲ್ಲೇ ಇರಿ" ಎಂದು ಭಗವಂತನು ಅಪ್ಪಣೆಮಾಡಿದನು. ಆಮೇಲೆ ಜೀಯರ್ (ಮಾಮುನಿಗಳು) ವಾನಮಾಮಲೈ ಜೀಯರ್ ಮೊದಲಾದ ಶಿಷ್ಯರ ಮೂಲಕ ಮಠವನ್ನು ಜೀರ್ಣೋದ್ಧಾರ ಮಾಡಿಸಿ, ತಿರುಮಲೈಯಾಳ್ವಾರ್ (ಶ್ರೀ ಶೈಲನಾಥಾರ್ಯ) ಎಂಬ ವ್ಯಾಖ್ಯಾನ ಮಂಟಪವನ್ನು ಕಟ್ಟಿಸಿ, ಪಿಳ್ಳೈ ಲೋಕಾಚಾರ್ಯರ ತಿರುಮಾಳಿಗೆಯ "ರಹಸ್ಯಂ ವಿಳೈನ್ದಮಣ್" ಎಂದು ಪ್ರಸಿದ್ಧವಾದ ಮೃತ್ತಿಕೆಯಿಂದ ಅದನ್ನು ಅಲಂಕರಿಸಿ, ಅದನ್ನು ಆಚಾರ್ಯಕುಲವೆಂದೇ ಭಾವಿಸಿ, ಅಲ್ಲಿ ದಿವ್ಯ ಪ್ರಬಂಧ ರಹಸ್ಯ ಗ್ರಂಥಗಳ ಅನವರತ ಅನುಸಂಧಾನಕಾಲಕ್ಷೇಪಾದಿಗೋಷ್ಠಿಗಳನ್ನು ನಡೆಸುತ್ತಾ ಇದ್ದರು. ಆಕಾಲದಲ್ಲಿ ಗೋವಿಂದದಾಸರಪ್ಪ ಎಂಬವರು ಶ್ರೀರಂಗಕ್ಕೆ ಬಂದು ಜೀಯರ್ ಸಿರಿಯಡಿಗಳನ್ನು ಆಶ್ರಯಿಸಿ ಅವರ ಪಾದಚ್ಛಾಯೆಯಂತೆ ನೆಲೆಸಿದರು. ಇವರು ಆಳ್ವಾರಿಗೆ ಮಧುರ ಕವಿಗಳಿದ್ದಂತೆ; ರಾಮಾನುಜರಿಗೆ ಎಂಬಾರ್ ಇದ್ದಂತೆ, ಸನ್ಯಾಸಾಶ್ರಮವನ್ನು ಸ್ವೀಕರಿಸಿ "ಪಟ್ಟರ್, ಪಿರಾನ್ ಜೀಯರ್" ಎಂಬ ಹೆಸರಿನಿಂದ ಬೆಳಗುತ್ತಾ ಶ್ರೀ ವರವರ ಮುನಿವರ್ಯರಿಗೆ ಅಂತರಂಗ ಶಿಷ್ಯರಾಗಿ ಅವರನ್ನು ಕ್ಷಣಮಾತ್ರವೂ ಅಗಲದೆ ಅವರ ನಿತ್ಯಸೇವಾ ಪರಾಯಣರಾಗಿದ್ದರು. ಶ್ರೀ ಜೀಯರ್ ಎಲ್ಲರಿಗೂ ಸ್ಪಷ್ಟವಾಗಿ ತಿಳಿಯುವಂತೆ ತಿರುವಾಯ್ಮೊಳಿ. ಮೊದಲಾದ ದಿವ್ಯ ಪ್ರಬಂಧಗಳಿಗೂ ಶ್ರೀ ವಚನಭೂಷಣಾದಿ ದಿವ್ಯ ಶಾಸ್ತ್ರಗಳಿಗೂ ವ್ಯಾಖ್ಯಾನ ಮಾಡುತ್ತಾ ರಹಸ್ಯ ತಾತ್ಪರ್ಯಗಳನ್ನು ವಿವರಿಸುತ್ತಾ ರಾಮಾನುಜಾಚಾರ್ಯ ವಶಗರಾಗಿ ಸದಾ ಅವರ ಸಿರಿನಾಮವನ್ನು ಹಾಡುತ್ತಾ "ನೂತ್ತಂದಾದಿ"ಅನುಸನ್ಧಾನ ಮಾಡುತ್ತಾ ರಾಮಾನುಜರ ವೈಭವವನ್ನು ಪ್ರಕಟಿಸುತ್ತಾ

ಶ್ರೀರಂಗಕ್ಕೆ ಮಂಗಳದೀಪವಾಗಿ ಬಿಜಮಾಡಿಸಿದ್ದರು. ಮಠದ ದೇವರಿಗೆ ತಮ್ಮ ಕೈಯಾರ ತಿರುವಾರಾಧನವನ್ನು ಸಮರ್ಪಿಸುತ್ತಾ, ಆಳ್ವಾರಾಚಾರ್ಯರುಗಳ ತಿರುನಕ್ಷತ್ರಗಳನ್ನೆಲ್ಲಾ ಪರಿಪಾಲಿಸುತ್ತಾ, ಸಕ್ಕರೆಪೊಂಗಲ್ ತಳಿಗೆಯನ್ನು ಸಮರ್ಪಿಸಿ, ಪಾವನವೂ ಭೋಗ್ಯವೂ ಆದ ಭಗವಂತನ ಪ್ರಸಾದದಿಂದ ಶ್ರೀವೈಷ್ಣವತದೀಯಾರಾಧನವನ್ನು ನಡೆಸುತ್ತಿದ್ದರು. ಇವರ ಕೀರ್ತಿ ಎಲ್ಲಾ ದಿಕ್ಕುಗಳಿಗೂ ಹರಡಿತು. ನಾನಾ ದೇಶಗಳಿಂದ ನೂರಾರು, ಸಾವಿರಾರು ಜನರು ಶ್ರೀರಂಗಕ್ಕೆ ಬಂದು ಅವರನ್ನು ಸಂದರ್ಶಿಸಿ, ಆಶ್ರಯಿಸಿ, ತಿರುಮಾಲಡಿಯಾರ್‌ಹಳ್ ಎನ್ನುವಂತೆ ಶ್ರೀಮನ್ನಾರಾಯಣನಿಗೆ ಕಿಂಕರರಾಗಿ, ನಿರ್ದೋಷಿಗಳಾಗಿ, ಗುಣಶಾಲಿಗಳಾಗಿ, ಗುರುಗಳಿಗೆ ಅನುಕೂಲರಾಗಿದ್ದು "ವರವರಮುನಿಭೃತ್ಯ" ರೆಂದರೆ ಪರಮಾರ್ಥವನ್ನರಿತವರು, ನಿಖಿಲಜನಸುಹೃತ್ತುಗಳು, ಅರಿಷಡ್ವರ್ಗಗಳನ್ನು ಗೆದ್ದವರು, ಆಚಾರ್ಯಾಭಿಮಾನಕ್ಕೆ ಪಾತ್ರರಾದವರು, ಸಜ್ಜನರ ಸತ್ಕಾರಕ್ಕೆ ಅರ್ಹರಾದವರು ಎಂದು ಶಿಷ್ಟ ಜನರು ಆದರಿಸುವಂತಾದರು. ನಾವೆಲ್ಲರೂ ಸದಾಚಾರ ಪರಾಯಣರಾಗಿ ಶ್ರೀ ವೈಷ್ಣವರಾಗಿ ಬಾಳಲು ಸಂಕಲ್ಪಿಸಿ ಶ್ರೀ ದೇವರಾಜ ಗುರುಗಳು, "ಎರುಂಬಿಯಪ್ಪಾ" ವರ್ಣಿಸಿರುವಂತೆ ನಿಜವಾಗಿಯೂ ವರವರಮುನಿ ಭೃತ್ಯರಾಗಿ ಜೀವಿಸುವಂತೆ ಶ್ರೀಮನ್ನಾರಾಯಣನು ಅನುಗ್ರಹಿಸಲಿ! ಸತ್ಕುಲ ಪ್ರಸೂತರೂ ವಿದ್ಯಾವಿನಯಸಂಪನ್ನರೂ ಸದಾಚಾರ ಪರಾಯಣರೂ ಆದ ಮುದಲಿಯಾಂಡಾನ್ ವಂಶದಲ್ಲಿ ಜನಿಸಿದ ಕೋಯಿಲ್ ಕಂದಾಡೈಯಣ್ಣನ್ (ವರದನಾರಾಯಣಗುರು) ಕಾಂಚೀಪುರದ ಪ್ರದಿವಾದಿ ಭಯಂಕರಂ "ಅಣ್ಣಾ" ಮೊದಲಾದ ಅಭಿಜನವಿದ್ಯಾವೃತ್ತಗಳಿಂದ ಶ್ರೇಷ್ಠರಾದ ಆಚಾರ್ಯ ಪುರುಷರೆಲ್ಲರೂ ಇವರ ಶ್ರೀಪಾದಸಂಬಂಧವೇ ತಮಗೆ ಧಾರಕ ಎಂದು ನಿಶ್ಚಯಿಸಿ ಜೀಯರ್ ಸಿರಿಯಡಿಗಳನ್ನು ಆಶ್ರಯಿಸಿ "ಚಿರೋಪಾಸಿತ ಸದ್ವೃದ್ಧರ್" ಎನ್ನುವಂತೆ ಆಚಾರ್ಯ ಸೇವಾ ನಿಷ್ಠರಾಗಿ ಶ್ರೀ ವರವರಮುನಿಗಳಿಗೆ ಅಂತರಂಗ ಭಕ್ತರಾದವರು. ಶ್ರೀವತ್ಸಕುಲತಿಲಕರಾದ ವೇದಾನ್ತಾಚಾರ್ಯರಾಗಿ ವಿದೇಶಗಳಲ್ಲೂ ವಿಖ್ಯಾತರಾಗಿದ್ದ ಶ್ರೀ ಕಾಂಚೀಹಸ್ತಿಗಿರಿನಾಥರಾದ ಅಣ್ಣಾ ಇವರ ವಿಶೇಷಕಟಾಕ್ಷಕ್ಕೆ ಪಾತ್ರರಾಗಿ "ಶ್ರೀವೈಷ್ಣವದಾಸ" ಎಂಬ ಬಿರುದನ್ನು ಪಡೆದು ಶ್ರೀ ಭಾಷ್ಯ ಕಾಲಕ್ಷೇಪಕ್ಕೆ ಸಹಕಾರಿಯಾಗಿದ್ದರು. ಜೀಯರ್ ನಾಯನಾರ್ ಎಂಬ ಆಚಾರ್ಯ ಪೌತ್ರರಿಗೆ ಶ್ರೀ ಭಾಷ್ಯ

ವನ್ನು ಉಪದೇಶಿಸಿದರು. ಈ ಜೀಯರ್ ನಾಯನಾರ್ "ಉಪದೇಶ ರತ್ನ ಮಾಲೈ"ಯನ್ನು ಸಂಸ್ಕೃತದಲ್ಲಿ ರಚಿಸಿ ಉಪಕರಿಸಿದಾರೆ.

ಕೇಶವನ ದಾಸರಲ್ಲಿ ವಿಶೇಷಾದರವುಳ್ಳ ನಮ್ಮಾಳ್ವಾರವರ ಅಭಿಮಾನಾ ನ್ತರ್ಭೂತರಲ್ಲಿ ಅಗ್ರಗಣ್ಯರಾದ ಜೀಯರ್ ಆಳ್ವಾರನ್ನು ಸಂದರ್ಶಿಸಲು ಬಯಸಿ ಶ್ರೀ ರಂಗನಾಥನ ಅಪ್ಪಣೆ ಪಡೆದು ಶ್ರೀನಗರಿಗೆ ಹೊರಟರು. ದಾರಿಯಲ್ಲಿ ತಿರುವಾಯ್ಮೊಳಿ. ಪ್ಪಿಳ್ಳೈ (ಸ್ವಾಚಾರ್ಯ) ಜನ್ಮಸ್ಥಳವಾದ ಕುನ್ತೀನಗರದಲ್ಲಿ ಮೂರು ರಾತ್ರಿ ತಂಗಿದ್ದು ವರಿಚ್ಚೂರ್ ಮಾರ್ಗವಾಗಿ ಬಂದು ಅಲ್ಲಿದ್ದವರನ್ನೆಲ್ಲ ತಮ್ಮ ಪಾದಧೂಳಿ ಎನ್ನುವಂತೆ ಅನುಗ್ರಹಿಸಿದರು. "ತಾನುಹನ್ದ ಊರೆಲ್ಲಾಂ ರ್ತತಾಳ್ಪಾಡಿ" ಎನ್ನುವಂತೆ ದಾರಿಯಲ್ಲಿದ್ದ ದಿವ್ಯ ದೇಶಗಳಿಗೆ ಹೋಗಿ ಆಯಾ ಸ್ಥಲೋಚಿತ ಮಂಗಳಾಶಾಸನವನ್ನು ಮಾಡಿ ವೈಕುಂತನಾಥ, ವಿಜಯಾಸನ, ಪುಳಿಂಗುಡಿ (ಭೂಮಿಪಾಲ), ದೇವರಾಜ, ಅರವಿಂದಲೋಚನ, ಮಾಯ ಕ್ಕೂತ್ತರ್, ವೈತ್ತಮಾನಿಧಿ, ಮಕರ ನೆಡುಂಕುಳೈ. ಕ್ಕಾದರ್ ಎಂಬ ಎಂಟು ದಿವ್ಯ ದೇಶಗಳಿಗೊ ಹೋಗಿ ಅಲ್ಲಿರುವ ಭಗವನ್ಮೂರ್ತಿಗಳನ್ನೂ ನಮ್ಮಾಳ್ವಾರನ್ನೂ ಆದಿಪ್ಪಿರಾರ್, ಪೊಲಿಂದು ನಿನ್ರಪಿರಾ ಎಂಬ ತಿರುಕ್ಕುರುಹೂರಿನ ಮೂಲದೇವ ರನ್ನೂ ಉತ್ಸವಮೂರ್ತಿಯನ್ನೂ ನಮಿಸಿ ನುತಿಸಿ ಮಂಗಲಾ ಶಾಸನಮಾಡಿ ದರು. ತಿರುಕ್ಕುರುಹೂರಿನ ಸಜ್ಜನರೆಲ್ಲರೂ ಬಂದು ಅವರನ್ನು ಸ್ವಾಗತಿಸಿ ಪ್ರತ್ಯುತ್ಥಾನ ಪ್ರಣಾಮಾದಿಗಳಾದ ಮೇಲೆ ಊರಿಗೆ ಕರೆದುಕೊಂಡು ಹೋಗಿ ದೇವರ ಸೇವೆ ಮಾಡಿಸಿದರು. ಮೊದಲು ಜೀಯರ್ ತಮ್ಮ ಆಚಾರ್ಯರ ತಿರುಮಾಳಿಗೆಗೆ ಹೋಗಿ ನಮಿಸಿ ಅಲ್ಲಿ ಬಿಜಮಾಡಿಸಿರುವ ಇನವಾಯ್ಃರ್ ತಲೈವರ್ (ನಂದತನಯ) ಎಂಬ ನಂದಗೋಪಕುಮಾರನ್ನು ಪೂಜಿಸಿದರು. ಆ ಊರಿನಲ್ಲಿ ಕೊಂಚಕಾಲ ತಂಗಿದ್ದು ಅವರು ಆಳ್ವಾರುಗಳ ದಿವ್ಯ ಪ್ರಬಂಧ ಗಳಿಗೂ ರಹಸ್ಯಗಳಿಗೂ ಅರ್ಥವನ್ನು ಉಪದೇಶಿಸುತ್ತಿದ್ದರು. ಅವರ ಕೀರ್ತಿ ಎಲ್ಲಾ ದಿಕ್ಕುಗಳನ್ನು ವ್ಯಾಪಿಸಿತು. ಆ ಕಾಲದಲ್ಲಿಯೇ ಆಚಾರ್ಯಹೃದಯ ವೆಂಬ ರಹಸ್ಯ ಗ್ರಂಥದ ಸರ್ವಾರ್ಥಗಳನ್ನೂ "ಯದುಗಿರಿ ನಾರಾಯಣನ ತಾಯಿ", ತಿರುನಾರಾಯಣಪುರತ್ತಾಯ್, ತಿರುತ್ತಾಳ್.ವರೈತಾತರ್, ಶ್ರೀ ಸಾನುದಾಸನ್ ಎಂಬ ಜನನ್ಯಾಚಾರ್ಯರು ಶ್ರೀವರವರಮುನಿಗಳಿಗೆ

ಉಪದೇಶಿಸಿದರು. ಜೀಯರ್ ಆಚಾರ್ಯಹೃದಯ ಸಂಪ್ರದಾಯವನ್ನಿಂತು ವರ್ಣಿಸಿದಾರೆ:-

ಮೂದವತ್ತೋರ್ ವಾಳ್.ತ್ತುಂ ಮುಡುಂಬೈ ಮಣವಾಳ
ತೋದವತ್ತಿ ತ್ತೂಯ್ ಮರೈಯೋರಾನ ಪೆತ್ತಾರ್, ತೀದತ್ತ
ಆಶಾರಿಯವಿದಯುಂ ಪೆತ್ತಾರ್, ನಮ್ಮಾಯಿ ಇವರ್
ತೇಶಾರರ್ತ್ತ ಕಣ್ ನೆಂಜೇ ಕಾಣ್.

ಆಚಾರ್ಯಹೃದಯಕ್ಕೆ ಶ್ರೀಲಯಿಯವರು ಮೊದಮೊದಲು ವ್ಯಾಖ್ಯಾನವನ್ನು ರಚಿಸಿದರು. ಮಣವಾಳಮಾಮುನಿಗಳು ಮುಪ್ಪಿನಲ್ಲಿ ದೇಹ ದೌರ್ಬಲ್ಯವನ್ನೂ ಲೆಕ್ಕಿಸದೆ ಬಹಳ ಶ್ರಮದಿಂದ ಹಾಸಿಗೆಯಲ್ಲಿ ಒರಗಿ ಕುಳಿತುಕೊಂಡೇ ಮತ್ತೊಂದು ವ್ಯಾಖ್ಯಾವನ್ನು ತಮ್ಮ ಶಿಷ್ಯರೆಲ್ಲರ ಉಜ್ಜೀವನಾರ್ಥವಾಗಿ ರಚಿಸಿ ಪರಮೋಪಕಾರ ಮಾಡಿರುವರು. ಪರಮತನಿರಾಸ ಮಾಡಿ ಇವರು ಇದರಲ್ಲಿ ಸ್ವಮತ ಸ್ಥಾಪನೆ ಮಾಡಿರುವುದರಿಂದ ಶ್ರೀವರವರಮುನಿಗಳನ್ನು "ವಕುಳಧರ ನಿಗಮ ಹೃದಯ ವಿವರಣ ಸರಸವಾಗ್ವೈಖರೀ ವಿಲಸಿತ ಪರಿಹೃತ ವಿಮತ ಮತಾನ್ತರ! ಎಂದೂ "ವಿಶದ ವಾಕ್ ಶಿಖಾಮಣಿ" ಎಂದು ನಾವೆಲ್ಲರೂ ಕೊಂಡಾಡುವ ಸೌಭಾಗ್ಯವುಂಟಾಯಿತು.

ಪಾಂಡ್ಯದೇಶದ ರಾಜ ಜೀಯರ್ ಜ್ಞಾನಾನುಷ್ಠಾನ ಪೂರ್ತಿಯನ್ನೂ ಸರ್ವಜ್ಞತ್ವಾದಿಗಳನ್ನು ಕಂಡು ಅವರ ಬಳಿ ಬಂದು ಆಶ್ರಯಿಸಿದನು. ಶ್ರೀ ಶಠಕೋಪದಾಸರ್ ಎಂದು ದಾಸ್ಯನಾಮವಿತ್ತು ಆತನಿಗೆ ಹೀಗೆ ಉಪದೇಶಿಸಿದರು:- "ಅದೃಷ್ಟದಲ್ಲಿ ಮುಕ್ಕಾಲುಭಾಗ ರುಚಿಯನ್ನೂ ಅದೃಷ್ಟಾನುಗುಣವಾದ ದೃಷ್ಟದಲ್ಲಿ ಕಾಲುಭಾಗ ರುಚಿಯನ್ನೂ ಬೆಳಸಿಕೊಂಡು ಬಾಳಬೇಕು" ಹಾಗೆಯೇ ಆತ ನಡೆದುಕೊಂಡು ಆಳ್ವಾರ್ ತಿರುನಹರಿ ಬೀದಿಗಳನ್ನು ಕಟ್ಟಿಸಿ ಆಳ್ವಾರಿಗೆ ಪ್ರಿಯವಾದ ವಿವಿಧ ಕೈಕಾರ್ಯಗಳನ್ನು ಮಾಡಿ ಕೃತಾರ್ಥನಾದನು. ತಿರುಕ್ಕುರುಂಗುಡಿಗೆ ಹೋಗಿದ್ದಾಗ ಅಲ್ಲಿದ್ದ ತಿರುವೇಂಗಡ ಮುಡೈಯಾನ್ ಎಂಬ ಬ್ರಾಹ್ಮಣರು ಜೀಯರ್ ವಿಶೇಷ ಕಟಾಕ್ಷಕ್ಕೆ ಪಾತ್ರರಾಗಿ ಅಲ್ಲಿರುವ ಐದು ಮೂರ್ತಿಗಳಿಗೂ ಬೇರೆ ಮಂದಿರ ಪ್ರಕಾರ ತೋಪು ಮಂಟಪಗಳನ್ನು ನಿರ್ಮಿ-

ಸಿದರು. ಜೀಯರ್ ಶ್ರೀರಂಗಕ್ಕೆ ಹಿಂತಿರುಗಿದ ಮೇಲೆ ವರವರಮುನಿದಿನ ಚರ್ಯಾ, ವರವರಮುನಿಶತಕಂ, ವರವರಮುನಿ ಚರಿತಂ ಮೊದಲಾದ ಸ್ತೋತ್ರ ನಾಟಕ ಚಂಪೂಕೃತಿಗಳನ್ನು ರಚಿಸಿರುವ ಎರುಂಬಿಯಪ್ಪಾ ಎಂಬ ದೇವರಾಜಗುರುಗಳು ಜೀಯರ್ ಅವರ ಉಪನ್ಯಾಸವನ್ನು ಕೇಳಿ ತುಂಬಾ ಸಂತೋಷಪಟ್ಟರು. ಇವರು ಮುಂದೆ ಶ್ರೀ ವರವರಮುನಿಗಳ ಅಷ್ಟದಿಗ್ಗಜಗಳಲ್ಲಿ ಒಬ್ಬರಾಗಿ ಬೆಳಗಿ ಜೀಯರ್ ಪರಮಾನುಗ್ರಹಕ್ಕೆ ಪಾತ್ರ ರಾದರು. ಇವರ ವೈಭವವನ್ನು ಶ್ರೀಶಾಸುದಾಸ ಗ್ರಂಥಮಾಲಾ ಪ್ರಕಟಿಸಿರುವ "ಶ್ರೀ ಯತಿರಾಜವಿಂಶತಿಃ"–ವರವರಮುನಿ ದಿನಚರ್ಯಾ ಎಂಬ ಪುಸ್ತಕದ ಪ್ರವೇಶದಲ್ಲಿ ಸಂಗ್ರಹವಾಗಿ ವರ್ಣಿಸಿದೆ.

- "ಶ್ರೀ ಶೈಲೇಶದಯಾ ಪಾತ್ರಂ" ಅವತಾರ:- ರಾಮಾನುಜಾಚಾರ್ಯರ ವೈಭವವನ್ನು ತಿರುಕ್ಕುರುಂಗುಡಿನಂಬಿ ಅವರಿಗೆ ಶಿಷ್ಯನಾಗಿ ಪ್ರಕಟಿಸಿದಂತೆ, ರಾಮಪ್ರಿಯನು ಪುತ್ರನಾಗಿ ಪ್ರಕಟಿಸಿದಂತೆ, ಶ್ರೀರಂಗನಾಥನು ಶಿಷ್ಯನಾಗಿ ಆಚಾರ್ಯ ಸಾರ್ವಭೌಮರಾದ ಶ್ರೀ ವರವರಮುನಿಗಳ "ಅಚಿಂತ್ಯ ದಿವ್ಯಾ ದ್ಭುತ ವೈಭವ" ವನ್ನಿಂತು ಪ್ರಕಟಿಸಿದನು.

ಶ್ರೀರಂಗದಲ್ಲಿ ಪವಿತ್ರೋತ್ಸವ ನಡೆಯುತ್ತಿದ್ದಾಗ ಒಂದು ದಿನ ಶ್ರೀ ರಂಗನಾಥನು ಮಂಗಲಾಶಾಸನಕ್ಕೆ ಬಂದಿದ್ದ ಜೀಯರಿಗೆ ಹೀಗೆ ಅಪ್ಪಣೆ ಮಾಡಿದನು. "ನಾಳೆಯಿಂದ ನಮ್ಮ ಹಿರಿಯ ಸಿರಿಮಂಟಪದಲ್ಲಿ ದ್ರಮಿಡೋಪ ನಿಷತ್ತಾದ ನಮ್ಮಾಳ್ವಾರ್‌ರವರ ತಿರುವಾಯ್ಮೊಳಿ.ಯ ವ್ಯಾಖ್ಯಾನ ಪಂಚಕದಕಾಲ ಕ್ಷೇಪವನ್ನು ನಡೆಸುತ್ತಾ ದುರ್ಗ್ರಹವಾದ ಅರ್ಥಗಳನ್ನೆಲ್ಲಾ ಪ್ರಕಾಶ ಪಡಿಸಿರಿ". ಆ ದಿವ್ಯಾಜ್ಞೆಯನ್ನು ಶ್ರೀವರವರಮುನಿಗಳು ಸಂತುಷ್ಟರಾಗಿ ಶಿರಸಾವಹಿಸಿ ಮಹಾ ಪ್ರಸಾದಂ ಎಂದು ಕೈಮುಗಿದು ಹೇಳಿ, ಒಡನೇ ಪ್ರವಚನವನ್ನು ಆರಂ ಭಿಸಿದರು. ಮಂಗಳಾಯತನವಾದ ಶ್ರೀರಂಗದಲ್ಲಿ ನಮ್ಮಾಳ್ವಾರ್ ಮೊದಲಾದ ದಿವ್ಯಸೂರಿಗಳ ಮತ್ತು ಆಚಾರ್ಯರ ಗೋಷ್ಠಿಯಲ್ಲಿ ಶ್ರೀರಂಗದ ವೈದಿಕೋತ್ತ ಮರೆಲ್ಲಾ ನೆರೆದಿದ್ದ ಮಹಾ ಸಭೆಯಲ್ಲಿ ಶ್ರೀ ರಂಗನಾಥನ ಸಮ್ಮುಖದಲ್ಲಿ ಒಂದು ವರ್ಷಕಾಲ ಭಗವದ್ವಿಷಯ ಕಾಲಕ್ಷೇಪ ಅತ್ಯದ್ಭುತವಾಗಿ, ಸಾಂಗವಾಗಿ, ಅವಿ ರತವಾಗಿ, ನಿರ್ವಿಘ್ನವಾಗಿ ನಡೆಯಿತು, ಅದನ್ನು ಕೇಳಿ ಆಬಾಲಗೋಪಾಲರೂ

ಸಂತೋಷಿಸಿ ಆ ಮಹಾಮುನಿಗಳ ಪ್ರಭಾವವನ್ನರಿತು ತಾವು ಧನ್ಯರಾದೆವೆಂದು ಭಾವಿಸಿದರು. ಶಾತ್ತುಮೊರೈ ಎಂಬ ಮಂಗಳಾಚರಣೆಯ ಕಾಲದಲ್ಲಿ ಸುಪ್ರೀತನಾದ ಭಗವಂತನು ಮಣವಾಳ ಮಹಾ ಮುನಿಗಳಿಗೆ ತೀರ್ಥಪ್ರಸಾದ ತಿರುಮಾಲೈ ಶೇಷವಸ್ತ್ರಾದಿ ಸನ್ಮಾನಗಳನ್ನು ಮಾಡಿ ದಿವ್ಯ ಪ್ರಬಂಧ ವ್ಯಾಖ್ಯಾನ ವೈಭವವನ್ನೂ ಜೀಯರ್ ಅವರ ಮಹಿಮೆಯನ್ನೂ ಪ್ರಕಾಶಪಡಿಸಲು ಸಂಕಲ್ಪಿಸಿದನು; ಆಚಾರ್ಯ ಸಂಭಾವನೆಯ ಶಿಷ್ಟಾನುಷ್ಠಾನವನ್ನು ತಾನೇ ಮಾಡಿ ತೋರಿಸಬೇಕೆಂದು ಅರ್ಚಕರ ಐದು ವಯಸ್ಸಿನ ಬಾಲಕನಂತೆ ಆ ಮಹಾ ಸಭೆಯ ಮಧ್ಯೆ ಫಲತಾಂಬೂಲಗಳನ್ನಿರಿಸಿದ್ದ ತಾಣಕ್ಕೆ ಬಂದು ಕೈಮುಗಿದುಕೊಂಡು ನಿಂತು ಈ ಮಂತ್ರವನ್ನು ಹೇಳಿ ಓಡಿಹೋಗಿ ಅಂತರ್ಧಾನನಾದನು:–

ಶ್ರೀಶೈಲೇಶದಯಾಪಾತ್ರಂ ಧೀಭಕ್ತ್ಯಾದಿಗುಣಾರ್ಣವಂ |
ಯತೀನ್ದ್ರ ಪ್ರವಣಂ ವನ್ದೇ ರಮ್ಯಜಾಮಾತರಂ ಮುನಿಂ ||

ಅದನ್ನು ಕಂಡು ಅಲ್ಲಿದ್ದವರಿಗೆಲ್ಲಾ ಆಶ್ಚರ್ಯವಾಯಿತು. ಆಗ ಭಗವಂತನು ಆ ಶ್ಲೋಕವನ್ನು ತಾಳ ಪತ್ರದಲ್ಲಿ ಬರೆದು ಅರಿಸಿನವನ್ನು ಧರಿಸಿಡುವಂತೆ ಆಪ್ಪಣೆ ಮಾಡಿದನು, ಅರ್ಚಕರು ಹಾಗೆಯೇ ಮಾಡಿ ತಟ್ಟೆಯಲ್ಲಿಟ್ಟರು. ಆಮೇಲೆ ಅಪ್ಪಿಳ್ಳೈ ಎಂಬ ಜೀಯರ್ ಶಿಷ್ಯರು (ಅಷ್ಟದಿಗ್ಗಜಗಳಲ್ಲಿ ಒಬ್ಬರು, ಇಯರ್ಪಾಐದುತಿರುವಂದಾದಿಗಳಿಗೆ ವ್ಯಾಖ್ಯಾನವನ್ನು ರಚಿಸಿದ ಮಹಾತ್ಮರು) "ವಾಳಿ.ತಿರುವಾಯ್ಮೊಳಿಪ್ಪಿಳ್ಳೈ ಎಂದು ಆರಂಭಿಸಿ ...ಮಣವಾಳಮಾಮುನಿಯೇ ಇನ್ನಮೊರು ನೂತ್ತಾಂಡಿರುಂ" ಎಂದು ಹಾಡಿದರು. ಭಗವಂತನು ಅಪ್ಪಿಳ್ಳೈಗೆ ಸತ್ಕಾರಮಾಡಿ ಅನುಗ್ರಹಿಸಿದನು. ತಿರುಪತಿ, ಕಾಂಚೀಪುರ ಮೊದಲಾದ ಎಲ್ಲಾ ದಿವ್ಯದೇಶಗಳ ದೇವಸ್ಥಾನಗಳಿಗೂ ವಿಷ್ವಕ್ಸೇನರ ಮೂಲಕ ದಿನವೂ ಈ ಪದ್ಯವನ್ನು ದಿವ್ಯ ಪ್ರಬಂಧಾರಂಭ ಮತ್ತು ಪರಿಸಮಾಪ್ತಿಯಲ್ಲಿ ಪಠಿಸುವಂತೆ ಸಂದೇಶವನ್ನು ಕಳುಹಿಸಿದನು.

ನಂಬೆರುಮಾಳ್ (ಶ್ರೀರಂಗದ ಉತ್ಸವಮೂರ್ತಿ) ಜೀಯರನ್ನು ಅಭಿನಂದಿಸಿ "ಮುಪ್ಪತ್ತಾರಾಯಿರ ಪ್ಪೆರುಕ್ಕರ್" ಎಂಬ ಹೆಸರು ನಿಮಗೆ ಅನ್ವರ್ಥವಾಗಿದೆ ಎಂದು ಹೇಳಿ, ತನ್ನ ಸಮಸ್ತ ಮರ್ಯಾದೆಗಳೊಡನೆ ಜೀಯರಿಗೆ

ಮೆರವಣಿಗೆಮಾಡಿಸಿ ಅವರ ಮಠಕ್ಕೆ ಕಳುಹಿಸಿಕೊಟ್ಟರು. ತಿರುಪತಿ ವೇಂಕಟೇಶ್ವರನೂ ವನಗಿರಿಯ ಸುಂದರಬಾಹುವೂ ಈ ಮಂತ್ರವನ್ನು ವಿಶೇಷವಾಗಿ ಪ್ರಕಟಿಸಿದರು.

## ಶ್ರೀ ವರವರಮುನಿವರ್ಯರ ಕೃತಿಗಳು

ಹೀಗೆ ಸರ್ವಲೋಕೋಜ್ಜೀವನಾರ್ಥವಾಗಿ ಅವತರಿಸಿದ ಇವರು ಅಖಿಲ ಜನ ಜೀವಾತುವಾದ ಲೋಕಾಚಾರ್ಯರ ದಿವ್ಯ ಸೂಕ್ತಿಗಳಲ್ಲಿ "ಮುಮುಕ್ಷುಪ್ಪಡಿ"ಗೆ ತಿರುಮನ್ತ್ರಾರ್ಥಂ ಎಂಬ ವ್ಯಾಖ್ಯಾನವನ್ನೂ ಶ್ರೀವಚನಭೂಷಣಂ, ತತ್ತ್ವತ್ರಯಂ ಎಂಬ ರಹಸ್ಯ ರತ್ನಗಳಿಗೆ ವ್ಯಾಖ್ಯಾನವನ್ನೂ ಅವರ ತಮ್ಮಂದಿರಾದ ಅಳ.ಹಿಯಮಣವಾಳ, ಪ್ಪೆರುಮಾಳ್ ನಾಯನಾರ್ ರಚಿಸಿರುವ ಆಚಾರ್ಯಹೃದಯಂ ಎಂಬ ದಿವ್ಯ ಪ್ರಬಂಧ ಸಾರಾರ್ಥ ಸಂಗ್ರಹಕ್ಕೆ ವ್ಯಾಖ್ಯಾನವನ್ನೂ ರಚಿಸಿರುವರು. ತಮ್ಮ ಬುದ್ಧಿಗೆ ತೋರಿದಂತೆ ಅನುಪಯುಕ್ತಾಂಶಗಳೊಂದನ್ನೂ ಸೇರಿಸದೆ, ಆಚಾರ್ಯರಿಂದ ತಾವು ಕೇಳಿ ಕಲಿತುದನ್ನುಮಾತ್ರ ವಾಕ್ಯ, ಸಂಗತಿ, ವಾಕ್ಯಾರ್ಥ, ತಾತ್ಪರ್ಯ ಮತ್ತು ವಿಶೇಷಾರ್ಥಗಳನ್ನು ತಿಳಿಸುತ್ತಾ ಶ್ರೀವರವರಮುನಿಗಳು ಪೂರ್ವಾಚಾರ್ಯರು ತಮ್ಮ ಕೃತಿಗಳಲ್ಲಿ ಹಿಂದಿನ ಆಚಾರ್ಯರೆಲ್ಲರೂ ಅರ್ಥಗೌರವದಿಂದ ಗುಪ್ತವಾಗಿರಿಸಿದ್ದ ರಹಸ್ಯಾರ್ಥಗಳನ್ನೆಲ್ಲ ಇವುಗಳಲ್ಲಿ ಪ್ರಕಟಿಸಿರುವರು. ಶ್ರುತಿ ಸ್ಮೃತಿ ಇತಿಹಾಸ ಉಪನಿಷತ್ ಶ್ರೀ ಪಾಂಚರಾತ್ರ ಮೊದಲಾದ ಪ್ರಮಾಣಗ್ರಂಥಗಳಿಂದಲೂ ಪೂರ್ವಾಚಾರ್ಯರ ಕೃತಿಗಳಿಂದಲೂ ಸಂವಾದಿ ವಾಕ್ಯಗಳನ್ನುದ್ಧರಿಸಿ, ಸಂಪ್ರದಾಯದಲ್ಲಿರುವ ಐಕಕಂಠ್ಯವನ್ನು ತೋರಿಸಿ, ಪರಮೋಪಕಾರ ಮಾಡಿರುವರು. ಈ ಆಚಾರ್ಯವರೇಣ್ಯರು ತಮ್ಮ ಉಪದೇಶಾನುಷ್ಠಾನ ವ್ಯಾಖ್ಯಾನಗಳಿಂದ ಜ್ಞಾನಿಗಳಿಗೂ ತಿಳಿಯಲು ಕಷ್ಟವಾದ ಆತ್ಮಸ್ವರೂಪಯಾಥಾತ್ಮ್ಯವನು ವಿವರಿಸಿರುವರು, ತತ್ತ್ವಾರ್ಥಗಳನ್ನು ವಿಶದಪಡಿಸಿ ಭಗವದ್ಭಕ್ತರನ್ನೆಲ್ಲ ಸಂತೋಷಪಡಿಸಿರುವರು.

### ಶ್ರೀ ವರವರಮುನಿಗಳವರ ಪ್ರಧಾನ ಕೃತಿಗಳಿವು :—

**ಸ್ವತಂತ್ರ ಕೃತಿಗಳು :—** ಯತಿರಾಜವಿಂಶತಿ, ಉಪದೇಶ ರತ್ನಮಾಲೈ, ತಿರುವಾಯ್ಮೊಳಿ. ನೂತ್ತಂದಾದಿ, ಆರ್ತಿ ಪ್ರಬಂಧಂ,

ಆಳ್ವಾರಾಚಾರ್ಯರುಗಳ ವಾಳಿ.ತ್ತಿರುನಾಮಮ್, ದೇವಾಧಿರಾಜ ಮಂಗ ಲಾಶಾಸನಂ, ದಿವ್ಯದೇಶಮಂಗಳಾಶಾಸನಂ, ಯತಿರಾಜಮಂಗಳಾಶಾಸನಂ, ಎಂಬ ಕೃತಿಗಳೂ ಇಲ್ಲಿ ಸೇರುತ್ತವೆ.

೨) **ವ್ಯಾಖ್ಯಾನಗಳು :—** ಇವರು **ಪೆರಿಯಾಳ್ವಾನ್ ತಿರುಮೊಳಿ.** ಎಂಬ ದಿವ್ಯಪ್ರಬಂಧದ ಮೊದಲನೇ ನಲವತ್ತು ಗೀತೆಗಳಿಗೆ ವ್ಯಾಖ್ಯಾನವನ್ನು ರಚಿಸಿರುವರು. ಉಳಿದ 4 ಗೀತೆಗಳಿಗೆ ಹಿಂದಿನವರ ವ್ಯಾಖ್ಯಾನವನ್ನು ಸೇರಿಸಿರುವ ಇವರ ಪ್ರಾಮಾಣಿಕತೆ, ಆಪ್ತಿ ಎಲ್ಲರಿಗೂ ಮಾದರಿಯಾಗಿದೆ. ಇವರ ವಚನ ಸುಧೆಯನ್ನಿಂತು ಸಂಗ್ರಹವಾಗಿ ವರ್ಣಿಸಬಹುದು :—

ಸೌಮ್ಯಜಾಮಾತೃಯೋಗೀನ್ದ್ರ ವಚನಂ ಲಲಿತಂ ಹಿತಂ |
ಸಾರವನ್ಮಧುರಂ ಸ್ನಿಗ್ಧಂ ವಿಶದಂ ರಸವನ್ಮಧು ||

(ಅ) **ಆಚಾರ್ಯಹೃದಯಂ, ಶ್ರೀವಚನಭೂಷಣಂ, ತತ್ವತ್ರಯಂ** ಮತ್ತು **ಮುಮುಕ್ಷುಪ್ಪಡಿ** ಎಂಬ ಸೂತ್ರಮಯ ರಹಸ್ಯ ಗ್ರಂಥಗಳಿಗೆ ವ್ಯಾಖ್ಯಾನವನ್ನು ರಚಿಸಿರುವರು.

(ಇ) **ಜ್ಞಾನಸಾರಂ, ಪ್ರಮೇಯ ಸಾರಂ,** ಎಂಬ ತಮಿಳು ಪದ್ಯ ರೂಪದಲ್ಲಿರುವ, ಶ್ರೀ ವೈಷ್ಣವ ಲಕ್ಷಣಗಳನ್ನು ತಿಳಿಸುವ, ಹಿರಿಯರ ಕೃತಿಗಳಿಗೆ ವ್ಯಾಖ್ಯಾನವನ್ನು ಬರೆದಿದ್ದಾರೆ.

(ಈ) ತಿರುವರಂಗತ್ತಮುದನಾರ್ ರಚಿಸಿರುವ **ಪ್ರಪನ್ನ ಗಾಯತ್ರೀ** ಎಂಬ **ರಾಮಾನುಜ ನೂತ್ತಂದಾದಿಗೆ ಉರೈ** ಎಂಬ ಪ್ರತಿ ಪದಾರ್ಥವನ್ನು ಶ್ರೀ ವರವರಮುನಿಗಳು ರಚಿಸಿ ನಿತ್ಯಾನುಸಂಧೇಯವಾದ ಈ ಕೃತಿಯನ್ನು ಎಲ್ಲರೂ ಕಲಿತು ಪಠಿಸಲು ಅವಕಾಶವನ್ನು ಕಲ್ಪಿಸಿದ್ದಾರೆ.

(ಉ) **ಗೀತಾತಾತ್ಪರ್ಯದೀಪ** ಭಗವದ್ಗೀತೆಗೆ ಆಚಾರ್ಯರು ರಚಿಸಿರುವ ಬಹು ಲಲಿತವಾದ ಸಂಸ್ಕೃತ ವ್ಯಾಖ್ಯಾನ.

(ಊ) ಶ್ರೀಭಾಷ್ಯಕಾರರು ರಚಿಸಿರುವ **ನಿತ್ಯಂ** ಎಂಬ ಭಗವದಾರಾಧನ ಕ್ರಮವನ್ನು ಎಲ್ಲರೂ ಕಲಿತು ದಿನವೂ ದೇವರ ಪೂಜೆ ಮಾಡಲು ಅನು

ಕೂಲವಾಗುವಂತೆ ತಮಿಳಿನಲ್ಲಿ ರಚಿಸಿ ವಿಶೇಷವಾಗಿ ದಿವ್ಯ ಪ್ರಬಂಧಗಳ ಶ್ರೀ ಸೂಕ್ತಿಗಳಿಂದಲೇ ಭಗವಂತನನ್ನು ಆರಾಧಿಸುವ ಪರಿಯನ್ನಿವರು ಪ್ರಕಟಿಸಿದ್ದಾರೆ.

(೪) ಪ್ರಮಾಣತ್ತಿರಟ್ಟು, ನಮ್ಮಾಳ್ವಾರರ ತಿರುವಾಯ್ಮೊಳಿ.ಗೆ ನಂಬಿಳ್ಳೈ (ವ್ಯಾಖ್ಯಾನ) ಉಪನ್ಯಾಸ ಮಾಡಿದಂತೆ ಶ್ರೀ ಕೃಷ್ಣಪಾದರು, ವಡಕ್ಕು ತ್ತಿರುವೀಧಿಪ್ಪಿಳ್ಳೈ, ಬರೆದ ಭಗವದ್ವಿಷಯದಲ್ಲಿ ಬರುವ ಎಲ್ಲಾ ಶ್ರೀ ಸೂಕ್ತಿಗಳಿಗೂ ಆಕರವನ್ನು ಸೇರಿಸಿ ಸಂಗ್ರಹಿಸಿರುವ ಇವರ ಕೃತಿ ಈ ಆಚಾರ್ಯವರ್ಯರ ಸ್ಮೃತ್ತಿಮೇಧಾ, ಸಂಶೋಧನಾ ಸಾಮರ್ಥ್ಯಗಳ ಪ್ರತೀಕವಾಗಿದೆ.

(೫) ಅರುಂಪದಂ ಭಗವದ್ವಿಷಯದಲ್ಲಿ ಬರುವ ಕಠಿಣ ಶಬ್ದಗಳಿಗೆ ಅರ್ಥ ವನ್ನೂ ಇತಿಹಾಸ–ಐತಿಹ್ಯಗಳನ್ನೂ ಸ್ವಾರಸ್ಯವಾಗಿ ವರ್ಣಿಸಿರುವ ಪರಿ ಯನ್ನೂ ಮೆಚ್ಚದವರಾರು ?

## ಶ್ರೀ ವರವರಮುನಿಗಳ ಚಾರಿತ್ರ್ಯ

"ರೂಪಮೇವಾಸ್ಯಮಹಿಮಾನಂ ವ್ಯಾಚಷ್ಟೇ" ಎಂಬ ವೇಕ್ತಿ ಯಂತೆಮೋ ಮನೋಭಾವವನ್ನು ಮುಖವೇ ಸೂಚಿಸುತ್ತದೆ.

"ಲಕ್ಷ್ಮಣಃ ಶುಭಲಕ್ಷಣಃ" "ಸಮುನಿಃ ದಿವ್ಯ ದರ್ಶನಃ" ಎಂಬ ಹಿರಿಯರ ವಾಣಿಯಂತೆ ಅತಿಮನೋಹರವಾದ ರೂಪವನ್ನೂ ಸದಾಚಾರ ವನ್ನು ಪವಿತ್ರವಾದ ಶೀಲವನ್ನೂ ಸರ್ವಸಂಮೋಹಕವಾದ ಪ್ರವಚನ ಶಕ್ತಿ ಯನ್ನೂ ಭಗವದ್ಜ್ಞಾನ ಭಕ್ತಿವೈರಾಗ್ಯಗಳನ್ನೂ ಶಾಸ್ತ್ರವಿಶ್ವಾಸ, ಆಚಾರ್ಯ ಪಾರತಂತ್ರ್ಯ, ಮೊದಲಾದ ಸದ್ಗುಣಗಳನ್ನೂ ಪಡೆದಿದ್ದ ಮಣವಾಳ ಮಹಾ ಮುನಿಗಳು ಶ್ರೀವಿಷ್ಣುಚಿತ್ತರಂತೆ, ಮೆಯ್ನಾವನ್ ಮೆಯ್ಯ್‌ಡಿಯಾರ್ ಸತ್ಯವಾದಿ, ಸತ್ಯವಾಕ್, ಸತ್ಯಸಂಕಲ್ಪವುಳ್ಳವರು ಭಗವಂತನ, ಅನನ್ಯಭಕ್ತರು, ದ್ವಿಜಕುಲತಿಲಕರು, ರಾಮಾನುಜರಲ್ಲಿ ವಿಶೇಷ ಪ್ರಾವಣ್ಯವುಳ್ಳವರು. ಯತಿ ವರತತ್ವವಿದಗ್ರೇಸರರಾದ ಇವರು ವಿಶದ ವಾಕ್ ಶಿಖಾಮಣಿಗಳು. "ಪೊಯ್ಯಿಲಾದ ಮಣವಾಳ ಮಹಾಮುನಿಗಳು" ಎಂದು ಅಪ್ಪಿಳ್ಳೈ ಇವರನ್ನು ವರ್ಣಿ ಸಿದಾರೆ. ಪರಾಂಕುಶಪರಕಾಲಾದಿ ದಿವ್ಯಸೂರಿಗಳ ಕೃತಿಗಳಂತೆ ಇವರ ಗ್ರಂಥ

ಗಳೂ "ಪ್ರೊಯ್ಯಿಲ್ ಪಾಡಲ್" ಹಾಗೆ ಪ್ರಮಾಣಾರ್ಹವಾದ ಆಪ್ತಗ್ರಂಥಗಳು ಎಂದು ನಾವು ಪರಿಗಣಿಸಬೇಕು.

ಧರ್ಮಭೀರುವಾದ ಇವರು ಯಾರಿಗೂ ಸಂಶಯ ಬರದಂತೆ ತಮ್ಮ ಬಾಳಿನಲ್ಲಿ ನಡೆದುಕೊಂಡರು, ಶುದ್ಧವಾದ ಸಾತ್ತ್ವಿಕ ಜೀವನವನ್ನು ನಡೆಸಿ ಎಲ್ಲರಿಗೂ ದಾರಿ ತೋರಿಸಿದರು. ಇವರು ಅಸತ್ ದ್ರವ್ಯವನ್ನು ಸ್ವೀಕರಿಸು ತ್ತಿರಲಿಲ್ಲ. ಭಕ್ತರ ಮಾತನ್ನು ಮೀರಬಾರದು, ಶ್ರೀವೈಷ್ಣವರ ಸಹವಾಸ ವನ್ನು ಬಿಟ್ಟು ತನಿಯಾಗಿ ದೇವರ ಸೇವೆ ಮಾಡಕೂಡದು ಎಂದು ಶಿಷ್ಯರಿಗೆ ಇವರು ಬೋಧಿಸಿದಾರೆ ಶಿಷ್ಯರ ತಪ್ಪನ್ನು ತೋರಿಸಿಕೊಟ್ಟು, ತಿದ್ದಿ, ಅವರನ್ನು ಸರಿಯಾದ ಮಾರ್ಗದಲ್ಲಿ ನಡೆಸುತ್ತಿದ್ದುದರಿಂದಲೇ ಇವರು ಆಚಾರ್ಯ ಸಾರ್ವ ಭೌಮರಾಗಿ ಬೆಳಗಿದರು. ಯಾತ್ರೆಯ ಕಾಲದಲ್ಲಿ ತಮಗೆ ಶಿಷ್ಯರೂ ಭಕ್ತರೂ ಅರ್ಪಿಸಿದ್ದನ್ನೆಲ್ಲಾ ಇವರು ಶ್ರೀರಂಗನಾಥನಿಗೆ ಸಮರ್ಪಿಸುತ್ತಿದ್ದರು. ತಮ್ಮ ಶಿಷ್ಯರಿಗೆ ಜೀವನ ಸಾಗುವುದು ಕಷ್ಟವೆಂದು ತಿಳಿದಾಗ ಅವರಿಗೆ ಬೇಕಾದ ಸಾಮಗ್ರಿಗಳನ್ನು ತಮ್ಮ ಮಠದಿಂದ ಕಳುಹಿಸಿಕೊಡುತ್ತಿದ್ದರು. ಹೀಗೆ ಶಿಷ್ಯರ ದೃಷ್ಟಾದೃಷ್ಟ ವಿಚಾರಗಳಲ್ಲೆಲ್ಲಾ ಆಸಕ್ತರಾಗಿದ್ದ ಮಣವಾಳ ಮಾಮುನಿಗಳು ತಮ್ಮ ಬಳಿಗೆ ಬಂದವರೆಲ್ಲಾ ಶ್ರೀಮನ್ನಾರಾಯಣನಿಗೆ ಕಿಂಕರರಾಗಿ ಮಂಗಲಾ ಶಾಸನಪರರಾಗುವಂತೆ ಮಾಡುತ್ತಿದ್ದರು. ಶ್ರೀ ರಾಮಾನುಜಾಚಾರ್ಯರೇ ಪ್ರಾಪ್ಯ ಮತ್ತು ಪ್ರಾಪಕವೆಂದು ನಂಬಿದ್ದ ಇವರು ತಮ್ಮ ಆಚಾರ್ಯರಾದ ತಿರುವಾಯ್ಮೊಳಿ ಪ್ಪಿಳ್ಳೈಯವರು ಉಪದೇಶಿಸಿದಂತೆ ನಡೆದುಕೊಂಡರು; ಗುರೂಪದೇಶ ಪರಂಪರಾಪ್ರಾಪ್ತವಾದ ಈ ಮಾರ್ಗವನ್ನೆಲ್ಲರೂ ಅರಿತು ಉಜ್ಜೀ ವಿಸಲಿ! ಎಂಬ ಉದಾರಾಶಯದಿಂದ ಇವರು ಉಪದೇಶರತ್ನಮಾಲೈಯನ್ನು ರಚಿಸಿದರು. ಈ ಕೃತಿಯನ್ನು ದಿನವೂ ಚಿಂತಿಸುವವರು ಶ್ರೀ ಯತಿರಾಜರ ಪರಮಾನುಗ್ರಹಕ್ಕೆ ಪಾತ್ರರಾಗಿ ಚೆನ್ನಾಗಿ ಬಾಳುವರು ಎಂದು ಫಲಶ್ರುತಿಯಲ್ಲಿ ಈ ಮುನಿವರ್ಯರು ತಿಳಿಸಿ ಭಗವದ್ರಾಮಾನುಜಾಚಾರ್ಯರೇ ಸರ್ವೋತ್ತಾ ರಕರು ಎಂದು ನಿರ್ಧರಿಸಿ ಪ್ರಕಟಿಸಿದಾರೆ. ಯತಿರಾಜವಿಂಶತಿಯಲ್ಲಿ ಅವರ ಪಾದ ಸೇವೆ ದಿನವೂ ವೃದ್ಧಿಯಾಗಲಿ! ಎಂದು ಪ್ರಾರ್ಥಿಸಿದಾರೆ. ಪೂರ್ವಾ ಚಾರ್ಯರುಗಳ ಕೃತಿಗಳೂ ವ್ಯಾಖ್ಯಾನಗಳೂ ಇಲ್ಲದೆ ಹೋಗಿದ್ದರೆ ನಮಗೆ ದಿವ್ಯ ಪ್ರಬಂಧಗಳ ಅರ್ಥವೇ ಗೋಚರವಾಗುತ್ತಿರಲಿಲ್ಲ. ಆದುದರಿಂದ ಆಳ್ವಾರು

ಗಳನ್ನೂ, ಆಚಾರ್ಯರುಗಳನ್ನೂ ಸದಾ ಕೃತಜ್ಞತೆಯಿಂದ ಸ್ಮರಿಸುತ್ತಾ ಅವರ ದಿವ್ಯ ಪ್ರಬಂಧಾನುಸಂಧಾನಮಾಡುತ್ತಾ ವ್ಯಾಖ್ಯಾನಗಳ ರಸಾನುಭವಮಾಡುತ್ತಾ ಕಾಲದ ಸದುಪಯೋಗಮಾಡಿ ಬಾಳಬೇಕೆಂಬುದೇ ಇವರ ಉಪದೇಶದ ಸಾರಾಂಶ.

"ವಿಷವನ್ನುತಿಂದರೆ ದೇಹಕ್ಕೆ ಮಾತ್ರಹಾನಿ, ಮಂತ್ರೌಷಧಿಗಳಿಂದ ಅದಕ್ಕೆ ಪ್ರತೀಕಾರ ಮಾಡಬಹುದು, ಆದರೆ ವಿಷಯ ದರ್ಶನ ಸ್ಪರ್ಶಾದಿಗಳಿಂದ ಆತ್ಮಹಾನಿಯಾಗುತ್ತದೆ; ಅದಕ್ಕೆ ಪ್ರತೀಕಾರವಿಲ್ಲ". ಹೀಗೆ ಸ್ಪಷ್ಟವಾಗಿ ದೋಷಗಳನ್ನು ತಿಳಿಸಿ ವಿಷಯವಾಸನೆ ಮತ್ತೆ ಬರದಂತೆ ಶ್ರೀಜೀಯರ್ ಉಪದೇಶಿಸುತ್ತಿದ್ದರು.

ಮನಸ್ಸನ್ನು ಕೆಡಿಸುವ ಅಹಂಕಾರವೇ ಕ್ರೋಧಮೋಹಾದಿ ಸಕಲ ದೋಷಗಳಿಗೂ ಕಾರಣ. ಹಣದಿಂದ ಮೋಹವೂ ಅದರಿಂದ ನರಕವೂ ಉಂಟಾಗುವುದರಿಂದ ಶ್ರೇಯಸ್ಸನ್ನು ಕೋರುವವರು ಅರ್ಥವೆಂಬ ಅನರ್ಥದಿಂದ ದೂರದಲ್ಲಿಡಬೇಕು. ಧರ್ಮಾನುಷ್ಠಾನಕ್ಕಾಗಿ ಹಣವನ್ನು ಬಯಸಬಾರದು; ಹಣವನ್ನು ಆಶಿಸದಿರುವುದೇ ಒಳ್ಳೆಯದು. ಕೆಸರನ್ನು ಮುಟ್ಟಿ ಕೈತೊಳೆಯುವುದಕ್ಕಿಂತ ಅದನ್ನು ಮುಟ್ಟದೆ ದೂರದಲ್ಲಿರುವುದೇ ಲೇಸಲ್ಲವೇ ?

ನಾನು ವಿಷ್ಣುಭಕ್ತರ ದಾಸರ ದಾಸನೆಂದೆಣಿಸಿ ಹರಿದಾಸರಿಗೆ ಇಷ್ಟ ವಿನಿಯೋಗಾರ್ಹನಾಗಿರುವವನೇ ಆತ್ಮಜ್ಞಾನಿಗಳಲ್ಲಿ ಶ್ರೇಷ್ಠ; ಹಾಗಿದ್ದರೇ ಸ್ವರೂಪಸಿದ್ಧಿ; ಆಚಾರ್ಯರಿಗೆ ಪ್ರತ್ಯುಪಕಾರವನ್ನು ಸಲ್ಲಿಸಿದಂತಾಗುವುದು.

ನಮ್ಮ ಸ್ವಾಮಿಯಾದ ಶ್ರೀಮನ್ನಾರಾಯಣ ಸುಲಭ, ಸುಶೀಲ, ದಯಾಳು, ಆದರೂ ಅವನು ತನ್ನ 'ಉಸಿರು, ಪ್ರಾಣ' ವೆಂದು ಎಣಿಸುವ ಮಹಾತ್ಮರನ್ನು, ಭಕ್ತರನ್ನು, ಭಾಗವತರನ್ನು ಸತ್ಕರಿಸದೆ ಹೋದರೆ ನಮ್ಮನ್ನು ನಿಗ್ರಹಿಸುವನು, ಆದುದರಿಂದ ಭಾಗವತಾಪಚಾರ ಮಾಡಬಾರದು. ಭಗವನ್ತನಿಗೆ ತನ್ನನ್ನು ಪೂಜಿಸುವವರಿಗಿಂತಲೂ ಅವನ ಭಕ್ತರ ಭಕ್ತರು ಅತ್ಯಂತ ಪ್ರಿಯರಾದವರು.

"ಧರಣೀಭಾಗ್ಯಸಂಚಯ" ವೆನ್ನಬಹುದಾದ ಮಹಾತ್ಮರ ಕಟಾಕ್ಷ ಎಲ್ಲರನ್ನೂ ಪಾವನಗೊಳಿಸುತ್ತದೆ, ದೇವರ ನಿಗ್ರಹಕ್ಕೆ ಪಾತ್ರರಾದವರನ್ನೂ

ಉದ್ಧರಿಸುತ್ತದೆ. ಹೀಗೆ ಉಪದೇಶಿಸುತ್ತಾ ಶಿಷ್ಯರು ಸಜ್ಜನರಿಗೆ ಅವಮಾನ ಮಾಡದಂತೆ ನೋಡಿಕೊಳ್ಳುತ್ತಿದ್ದರು.

ಪರಮಪುರುಷಾರ್ಥವಾದ ಭಗವಂತನ ದಾಸ್ಯವೆಂಬ ಮಹಾರಸ ವನ್ನರಿತವನ್ನು ತನ್ನ ಮನೆಯಲ್ಲಿ ನಿಶ್ಶಂಕೆಯಿಂದ ಶ್ರೀ ವೈಷ್ಣವರು ಬಂದು ಸ್ವಗೃಹದಲ್ಲಿರುವಂತೆ ಅವರಿಗೆ ಪರತಂತ್ರನಾಗಿರಬೇಕು.

ಆಲದಮರ ಅದರ ಬೀಜದಲ್ಲಿ ಅಡಗಿರುವಂತೆ, ಪ್ರಣವದಲ್ಲಿ ವೇದ ರಾಶಿಯೂ ಎಲ್ಲ ಶಬ್ದಗಳೂ ಇರುವಂತೆ, ಭಾಗವತ ಶೇಷತ್ವವಿದ್ದರೆ ಸರ್ವಾರ್ಥ ಸಿದ್ಧಿಯಾಗವುದು. ತಿರುಮನ್ತ್ರದ ಸಾರಾರ್ಥವಾದ ಈ ಚರಮಾರ್ಥ ವಿಶೇಷ ವನ್ನರಿತವರು ಭಗವದ್ವಿಷಯ ರಹಸ್ಯಗಳನ್ನೆಲ್ಲಾ ಅರಿಯಬೇಕಾಗಿಲ್ಲ. ಅನು ಷ್ಠಾನವಿಲ್ಲದ ಜ್ಞಾನವೂ ಉಪದೇಶವೂ ನಿರರ್ಥಕ, ವೇಶ್ಯೆ ಹೇಳುವ ಪಾತಿ ವ್ರತ್ಯದಂತೆ ವ್ಯರ್ಥ.

ಭಗವತ್ಸೇವೆ ಮಾಡುವವರ ದೋಷಗಳನ್ನು ಎಣಿಸಕೂಡದು, ಅವರ ಗುಣಗಳನ್ನು ಗುರ್ತಿಸಿ ಗೌರವಿಸಬೇಕು ಎಂದು ಶಿಷ್ಯರಿಗೆ ಉಪದೇಶಿಸುವಂಥ ಭಾಗವತಪ್ರಾವಣ್ಯ ಮಣವಾಳ ಮಾಮುನಿಗಳಿಗೆ ಸಹಜವಾಗಿದ್ದಿತು.

## ದಿವ್ಯದೇಶಯಾತ್ರೆ

ಭಗವದ್ಭಾಗವತ ವೈಭವಾಭಿಜ್ಞರಲ್ಲಿ ಅಗ್ರೇಸರರಾದ ಶ್ರೀ ವರವರಮುನಿಗಳು ತಮ್ಮ ಅಂತರಂಗ ಶಿಷ್ಯರೊಡನೆ ಮತ್ತೊಮ್ಮೆ ತಿರುಪತಿ ಮೊದಲಾದ ದಿವ್ಯ ದೇಶಗಳಲ್ಲಿ ನೆಲೆಸಿ ಭಗವತ್ಸೇವೆ ಮಾಡುತ್ತಿರುವವರ ಸಂದರ್ಶನ ಸಹವಾಸ ಸಲ್ಲಾಪಾದಿಗಳನ್ನು ಬಯಸಿ ಮತ್ತೆ ದಿವ್ಯ ದೇಶಯಾತ್ರೆಯನ್ನು ಕೈಗೊಂಡರು. ಕಾಂಚೀ, ಘಟಿಕಾಚಲ, ತಿರುಪತಿ, ತಿರುವಳ್ಳೂರ್, ಮಧುರಾಂತಕ, ತಿರು ವಹೀಂದ್ರ ಪುರಗಳನ್ನು ಸಂದರ್ಶಿಸಿದ ಮೇಲೆ ಚೋಳದೇಶದ ದಿವ್ಯ ಸ್ಥಳಗಳಿಗೆ ಹೋಗಿ ಮಂಗಳಾಶಾಸನಮಾಡಿದರು.

"ತಿರುವಾಲಿ ತಿರುನಗರಿ"ಯಲ್ಲಿ ಬಿಜ ಮಾಡಿಸಿರುವ ಅತಿರಮ್ಯವಾದ ತಿರುಮಂಗೈಯಾಳ್ವಾರ ದಿವ್ಯ ಮಂಗಳವಿಗ್ರಹವನ್ನು ಕಣ್ಣಾರಕಂಡು

ಬಾಯೂರ ನುತಿಸಿ ಮಂಗಳಾಶಾಸನ ಮಾಡಿದ ಮೇಲೆ ತಿರುಕ್ಕಣ್ಣಪುರಕ್ಕೆ ಹೋಗಿ ಶೌರಿರಾಜನನ್ನು ಸಂದರ್ಶಿಸಿ "ಕಣ್ಣಪುರತ್ತಡಿಯೋ" ಎಂಬ ಹೆಸರುಳ್ಳ ಪರಕಾಲ ಕವೀಂದ್ರರನ್ನು ಪ್ರತಿಷ್ಠಿಸಿದರು. ಆಮೇಲೆ ತಿರುಕ್ಕುಡಂದೈ (ಕುಂಭ ಕೋಣ), ತಿರುಪ್ಪೇರ್ ಮೊದಲಾದ ದಿವ್ಯ ದೇಶಗಳಿಗೆ ಹೋಗಿ ಮಂಗಳಾ ಶಾಸನಮಾಡಿ ಶ್ರೀರಂಗಕ್ಕೆ ಹಿಂತಿರುಗಿ ಬಂದು ಶಿಷ್ಯರು ತಮಗೆ ಕಾಣಿಕೆಯಾಗಿ ಸಮರ್ಪಿಸಿದ ಸುಂದರವಾದ ವಸ್ತ್ರ ರತ್ನಾಭರಣ ಛತ್ರಚಾಮರ ತಾಲವೃನ್ತಾದಿ ಸರ್ವಸ್ವವನ್ನೂ ಶ್ರೀರಂಗನಾಥನಿಗೆ ಸಮರ್ಪಿಸಿ ಮಂಗಳಾಶಾಸನಮಾಡಿ, ಭಗ ವಂತನಿಂದ ಸತ್ಕೃತರಾಗಿ ಮಠಕ್ಕೆ ಬಿಜಮಾಡಿಸಿದರು. ದಿನವೂ ಭಗವಂತನ ದರ್ಶನ–ಮಂಗಳಶಾಸನಪರರಾಗಿ ದಿವ್ಯಪ್ರಬಂಧಾನುಸಂಧಾನ ವ್ಯಾಖ್ಯಾನ ಪ್ರವಚನ ಪರಾಯಣರಾಗಿ ನೆಲೆಸಿದ್ದರು.

## ದಕ್ಷಿಣದೇಶಯಾತ್ರೆ

ಕೊಂಚಕಾಲವಾದ ಮೇಲೆ ಮತ್ತೆ ಶ್ರೀ ವರವರಮುನಿಗಳು ಶ್ರೀರಂಗ ನಾಥನ ಅನುಮತಿ ಪಡೆದು ಕೂಡಲ್ ಎಂಬ ಮಧುರೆಗೆ ಹೋಗಿ "ತಿರುಪ್ಪ ಲ್ಲಾಂಡು" (ಮಂಗಳಾ ಶಾಸನ ಪ್ರಬಂಧ), ಅವತರಿಸಿದ ಸ್ಥಲವೆಂದು ಅದನ್ನು ಕೊಂಡಾಡಿ ಅಲ್ಲಿರುವ ಅಳ.ಹರ್ ಎಂಬ ಮಲ್ಲಾಣ್ಡ ತಿರ್ಮ್ಮೋೞ್ ಮಣಿವಣ್ಣನಿಗೆ ಮಂಗಲಾಶಾಸನ ಮಾಡಿದರು. ಆ ದೇಶದ ರಾಜ ಮಹಾಬಲಿವಾಣರಾಯನು ಜೀಯರನ್ನು ಆಶ್ರಯಿಸಿ ಅವರಿಂದ ಪಂಚ ಸಂಸ್ಕಾರ ಮಾಡಿಸಿಕೊಂಡು ಅವರ ಸೇವಕನಾಗಿ ಬೆಳಗಿದನು. ಮುತ್ತರಶನ್ ಎಂಬ ಗ್ರಾಮವನ್ನು ಆಚಾರ್ಯ ರಿಗೆ ಸಮರ್ಪಿಸಿದನು. ಅದನ್ನು ಅಂಗೀಕರಿಸಿ ಜೀಯರ್ ಅದಕ್ಕೆ ಅಳ.ಹಿಯ ಮಣವಾಳ ನಲ್ಲೂರ್ ಎಂದು ಹೆಸರಿಟ್ಟರು.

ಮಧುರೆಯಿಂದ ಹೊರಟು ತಿರುಪ್ಪುಲ್ಲಾಣಿ (ದರ್ಭಶಯನ), ಆಳ್ವಾರ್ ತಿರುನಗರಿ, ಶ್ರೀ ವಿಲ್ಲಿಪುತ್ತೂರ್, ತಿರುಮಾಲಿರುಂ ಶೋಲೈ (ವನಗಿರಿ) ಗಳಿಗೆ ದಯಮಾಡಿಸಿ ಮಂಗಳಾಶಾಸನ ಮಾಡಿದರು. ವನಗಿರಿಯ ದೇವಾಲಯದ ಕಾರ್ಯನಿರ್ವಾಹಕ್ಕಾಗಿ ಯತಿರಾಜಜೀಯರ್ ಎಂಬ ತಮ್ಮ ಶಿಷ್ಯರನ್ನು ಕಳುಹಿಸಿಕೊಟ್ಟರು. ಅವರೂ ಮಹಾಬಲಿ ವಾಣರಾಯನೂ ತೋಳ.ಪ್ಪರ್

ಮೊದಲಾದವರೂ ಸುಂದರಬಾಹುವಿಗೆ ಸರ್ವವಿಧವಾದ ಸೇವೆಗಳನ್ನೂ ಆಚಾರ್ಯ ಪ್ರೀತ್ಯರ್ಥವಾಗಿ ಮಾಡಿ ಕೃತಾರ್ಥರಾದರು.

ಶ್ರೀರಂಗಕ್ಕೆ ಹಿಂತಿರುಗಿದ ಮೇಲೆ ಮಣವಾಳ ಮಾಮುನಿಗಳು ಶ್ರೀ ರಂಗನಾಥನ ಸನ್ನಿಧಿಗೆ ಉತ್ಸವ ಕಾಲಗಳಲ್ಲೆಲ್ಲಾ ಆಲಸ್ಯವಿಲ್ಲದೆ ಹೋಗಿ ಮಂಗ ಳಾಶಾಸನ ಮಾಡುತ್ತಿದ್ದರು. ವಿಶೇಷವಾಗಿ ಧನುರ್ಮಾಸದಲ್ಲಿ ಅರುಣೋ ದಯವನ್ನೇ ಬಯಸುತ್ತಾ ಶ್ರೀರಂಗರಾಜನ ಸನ್ನಿಧಿಗೆಹೋಗಿ ಸುಪ್ರಭಾತವನ್ನು ಹಾಡಿ ಶಾಸ್ತ್ರೋಕ್ತ ರೀತಿಯಲ್ಲಿ ಆರಾಧನವನ್ನು ನಡೆಸುತ್ತಿದ್ದರು, ತಮ್ಮ ಸಂಕಲ್ಪದಿಂದ ಲಭಿಸಿದ ತತ್ತತ್ ಕಾಲೋಚಿತ ವಸ್ತು (ಶಾಕಮೂಲಫಲಾದಿ) ಗಳಿಂದ ಹಾಲು ತುಪ್ಪ ಸಕ್ಕರೆ ಇವುಗಳಿಂದಲೂ ಕೂಡಿದ ಭಕ್ಷ್ಯ ಭೋಜ್ಯಗಳ ನಿವೇದನವನ್ನು ಸಮರ್ಪಿಸುತ್ತಿದ್ದರು. ಆಳ್ವಾರಿಗೆ ಸಂತೋಷವಾಗುವಂತೆ ದಿವ್ಯ ಪ್ರಬಂಧಗಳ ವ್ಯಾಖ್ಯಾನಗಳನ್ನೆಲ್ಲಾ ಎಡೆಬಿಡದೆ ಅನುಸಂಧಾನ ಮಾಡುತ್ತ ಇದ್ದರು. ಪೆರಿಯತಿರುಪುಲ್ಲೈನಂಬಿ ವಂಶದ ಏಟ್ಟೂರ್ ಶಿಂಗರಾ ಚಾರ್ಯರು ವರವರಮುನಿಗಳನ್ನು ಆಶ್ರಯಿಸಿದರು. ಅವರ ಮೂಲಕ ಬಂದ ದ್ರವ್ಯ ಗಳಿಂದ ಕುರುಕಾಪುರಿಯಲ್ಲಿ ಆಳ್ವಾರ್ ಗೋಪುರ ನಿರ್ಮಾಣ ಕೈಂಕರ್ಯ ಮೊದಲಾಯಿತು; ಜೀಯರ್ ನಾಯನಾರ್ ಕಾಲದಲ್ಲಿ ಅದರ ಶಿಖರ ನಿರ್ಮಾಣವಾಯಿತು.

ಹೀಗೆ ವಾಚಾಮಗೋಚರವಾದ ವೈಭವವುಳ್ಳ ಶ್ರೀ ವರವರಮುನಿ ಗಳನ್ನು ಆಶ್ರಯಿಸಿದವರೆಲ್ಲಾ ಸಾತ್ತ್ವಿಕರಾಗಿ, ಸದಾಚಾರ ಪರಾಯಣರಾಗಿ ತತ್ತ್ವದರ್ಶಿಗಳಾಗಿ ಉಜ್ಜೀವಿಸಿದರು. ಅವರಲ್ಲಿ ಪ್ರಮುಖರಾದ ಈ ಎಂಟುಜನ "ಅಷ್ಟದಿಗ್ಗಜ" ಗಳೆಂದು ಪ್ರಸಿದ್ಧರಾಗಿದಾರೆ :– ವಾನಮಾಮಲೈ ಜೀಯರ್ ತಿರುಪತಿ ಎಂಬೆರುಮಾನಾರ್ ಜೀಯರ್, ಪಟ್ಟರ್‌ಪಿರ್ರಾ ಜೀಯರ್, ಕೋಯಿಲ್ ಕಂದಾಡೈಯಣ್ಣ್, ಎರುಂಬಿಯಪ್ಪಾ, ಅಪ್ಪಿಳ್ಳೈ, ಅಪ್ಪಿಳ್ಳಾರ್, ಮತ್ತು ಪ್ರತಿವಾದಿಭಯಂಕರಂ ಅಣ್ಣಾ. ಅಪ್ಪಿಳ್ಳೈ ಜೀಯರ್ ಅಪ್ಪಣೆಯಂತೆ 'ಇಯಲ್‌ಪಾ' ಐದು ತಿರುವಂದಾದಿಗಳಿಗೆ "ಉರೈ", ಪ್ರತಿ ಪದಾರ್ಥವನ್ನು ರಚಿಸಿದಾರೆ; ಇವರು ಯತಿರಾಜವಿಂಶತಿಗೆ ವ್ಯಾಖ್ಯಾನವನ್ನು ರಚಿಸಿ ಆಚಾ ರ್ಯರನ್ನು ಸಂತೋಷ ಪಡಿಸಿದರು ಎಂಬುದನ್ನಿಲ್ಲಿ ಸೂಚಿಸುವುದು ಅಗತ್ಯ.

ಇತ್ಥಂಭೃತ್ಯಾನರ್ಥಿನ ಸ್ತೋಷಯಿತ್ವಾ
ದೇಶೇ ತಸ್ಮಿನ್ ದರ್ಶಯನ್ ವೈಭವಂ ಸ್ವಂ |
ಪ್ರತ್ಯಾವೃತ್ತಸ್ತ್ವನ್ತಿಮೋಪಾಯತತ್ವಂ
ತತ್ರತ್ಯೇಷು ಸ್ಥಾಪಯಿತ್ವಾ ಜನೇಷು||

ಎನ್ನುವಂತೆ ಹೋದಕಡೆಯಲ್ಲೆಲ್ಲಾ ಮನ್ತ್ರಾರ್ಥ ಶ್ರವಣ ತತ್ಪರರಾದ ಶಿಷ್ಯರನ್ನೆಲ್ಲಾ ತಮ್ಮ ಸರಸ ವಿಶದ ಮಧುರ ವಾಕ್ಕುಗಳಿಂದ ಸಂತೋಷಪಡಿಸಿ ತಮ್ಮ ವೈಭವವನ್ನು ಪ್ರಕಟಪಡಿಸುತ್ತಾ ಎಲ್ಲಾ ಜನರಲ್ಲೂ ಅನ್ತಿಮೋಪಾಯ ವಾದ ಪ್ರಪತ್ತಿಯ ತತ್ವಾರ್ಥವನ್ನೂ ಆಚಾರ್ಯಾಭಿಮಾನ ನಿಷ್ಠೆಯನ್ನೂ ಸ್ಥಾಪಿಸಿ ಶ್ರೀರಂಗಕ್ಕೆ ವರವರಮುನಿಗಳು ಹಿಂತಿರುಗಿದರು.

ಜಗತ್ತಿನ ಜನರೆಲ್ಲರೂ ಅರ್ಥಪಂಚಕ ನಿಷ್ಠರಾಗಿ ಚರಮೋಪಾಯ ನಿಷ್ಠರಾಗಿ ಉಜ್ಜೀವಿಸುವಂತೆ ತಮ್ಮ ಉಪದೇಶಾನುಷ್ಠಾನಗಳಿಂದ ಅನುಗ್ರಹಿಸಿದ ಜೀಯರು ಕೃತಕೃತ್ಯರಾಗಿ ತಮ್ಮ ಅನುಷ್ಠಾನ ವಿಶೇಷವನ್ನಿಂತು (ಆರ್ತಿಪ್ರಬಂಧದ ಈ ಪದ್ಯದಲ್ಲಿ) ತಿಳಿಸಿದಾರೆ :—

"ದಕ್ಷಿಣದಿಕ್ಕಿಗೆ ಅಲಂಕಾರವಾಗಿರುವ ಸುಂದರವಾದ ಶ್ರೀರಂಗಸ್ವಾಮಿಯ ಸಿರಿಯರುಳಿಗೆ (ಪರಮಕೃಪೆಗೆ) ಪಾತ್ರನಾದೆನು. ಶ್ರೀರಂಗದಲ್ಲಿ ನಿತ್ಯವಾಸ ಮಾಡುವ ಭಾಗ್ಯಲಭಿಸಿತು; ಸದ್ಗುಣಭರಿತರಾದ ನಮ್ಮಾಳ್ವಾರರ ದಿವ್ಯ ಪ್ರಬಂಧಾನುಭವವೂ ಮಧುರಕವಿಗಳ ಆಚಾರ್ಯ ಪಾರತಂತ್ರ್ಯ ನಿಷ್ಠೆಯೂ ಲಭಿಸಿತು ; ಪೂರ್ವಾಚಾರ್ಯರ ಶ್ರೀ ಸೂಕ್ತಿಗಳನ್ನು ಆರೈದು ಸದಾ ಅವುಗಳಿಂದ ಕಾಲಕ್ಷೇಪಮಾಡುವ ಸೌಭಾಗ್ಯವೊದಗಿತು! ಮತ್ತೊಂದರಲ್ಲಿಯೂ ಮನಸ್ಸು ಹೋಗದೆ ಇರುವಂತಾಯಿತು! ಗರ್ವ, ಅಸಹನೆಗಳಿಲ್ಲದೆ ಪರಸಮೃದ್ಧಿಯಿಂದ ಎಲ್ಲರೊಡನೆಯೂ ಕೂಡಿಬಾಳುವ ಹಿರಿಮೆಯೂ ಒದಗಿತು !" ಇಂತಹ ಮಹಾತ್ಮರು "ಧರಣೀ ಭಾಗ್ಯಸಂಚಯ" ವೆನ್ನಬೇಕು ಇವರ ಸಮಾಶ್ರಯಣದಿಂದಲೂ ವಿಶೇಷ ಕಟಾಕ್ಷದಿಂದಲೂ ಪಶುಪಕ್ಷಿ ವೃಕ್ಷಾದಿಗಳೂ ಮುಕ್ತಿ ಹೊಂದಿದವು. ಇಂತಹ ಮಹಾ ಮಹಿಮಾಶಾಲಿಗಳು ಕೈಯಿಂದ ಮುಟ್ಟಿದ ವಸ್ತುಗಳೂ ಕಣ್ಣಿಂದ ನೋಡಿದ ಸ್ಥಾವರ ವಸ್ತುಗಳೂ

ಮುಕ್ತಿಹೊಂದುವಾಗ ಅವರ ಬಂಧುಜನರಿಗೂ ಶಿಷ್ಯರಿಗೂ ಅಭಿಮಾನಕ್ಕೆ ಪಾತ್ರರಾದವರಿಗೂ ಮುಕ್ತಿಯುಂಟೆಂಬುದು ಸಿದ್ಧ.

ಇವರ ಶ್ರೀಪಾದತೀರ್ಥವನ್ನು ಸ್ವೀಕರಿಸಿ ಅನೇಕ ಜನರು ಅನಾಯಾಸವಾಗಿ ಸ್ವಸ್ವರೂಪ ಜ್ಞಾನವನ್ನು ಹೊಂದಿದರು; ಕಟಾಕ್ಷಾನುಕಂಪಾದಿಗಳಿಂದಲೂ ಅಮೃತದಂತೆ ಪ್ರಿಯವಾದ ವಚನಗಳಿಂದಲೂ ಮಂತ್ರರತ್ನೋಪದೇಶದಿಂದಲೂ ಅದರ ಅರ್ಥವಿವರಣೆಯನ್ನು ಕೇಳುವುದರಿಂದಲೂ, ಕೆಲವರು ಆತ್ಮಸಮರ್ಪಣಮಾಡಿಯೂ ತಮ್ಮ ಅಜ್ಞಾನವನ್ನು ನಿವೇದನಮಾಡಿಯೂ, ಕ್ಷೇಮವನ್ನು ಹೊಂದಿದರು. ಮತ್ತೆ ಕೆಲವರು ಮಣವಾಳಮಾಮುನಿಗಳ ಚರಣಾರವಿಂದಗಳನ್ನು ಭಜಿಸುವುದರಿಂದಲೂ, ಬೇರೆ ಕೆಲವರು ಅವರ ರೂಪ ಧ್ಯಾನದಿಂದಲೂ ಧನ್ಯರಾದರು. ಕೆಲವರು ಅವರ ನಾಮ ಸಂಕೀರ್ತನದಿಂದಲೂ ಕೆಲವರು ಅವರ ದಿವ್ಯಗುಣವರ್ಣನೆಯನ್ನು ಕೇಳಿಯೂ ಅವುಗಳನ್ನು ಸ್ತುತಿಸುವುದರಿಂದಲೂ ಅವರು ಇದ್ದ ದಿಕ್ಕಿಗೆ ನಮಸ್ಕಾರ ಮಾಡಿಯೂ ಉಜ್ಜೀವಿಸಿದರು.

ಅವರ ವೈಭವವನ್ನು ಧ್ಯಾನಿಸುತ್ತಾ ಕೆಲವರೂ ಮಣವಾಳ ಮಾಮುನಿಗಳು ಅನ್ಯಾದೃಶರು (ಅವರಂತೆ ಮತ್ತೊಬ್ಬರಿಲ್ಲ) ಎಂದು ಹೇಳುತ್ತಾ ಬೇರೆ ಕೆಲವರೂ ಅವರ ಶಿಷ್ಯಪ್ರಶಿಷ್ಯರ ಸಂಬಂಧ ಕಟಾಕ್ಷಗಳಿಂದಲೂ ಮತ್ತೆ ಕೆಲವರೂ ಸಂಸಾರಬಂಧನನ್ನು ಕಳೆದುಕೊಂಡರು. ಶ್ರೀವರವರಮುನಿಗಳ ಪಾದಸ್ಪರ್ಶದಿಂದ ಪವಿತ್ರವಾದ ಈ ಭೂಮಿಯಲ್ಲಿ ಹುಟ್ಟಿ ಅವರ ವಿಶೇಷ ಕಟಾಕ್ಷ ಪಾತ್ರರಾಗಿ ಎಲ್ಲರೂ ಉಜ್ಜೀವಿಸಿದರು.

ಸಂಸಾರಾಗ್ನಿಯಲ್ಲಿ ಬೆಂದಿರುವ ನಮ್ಮನ್ನೆಲ್ಲಾ ಉದ್ಧರಿಸಲು ಈ ಭೂಲೋಕದಲ್ಲಿ ಆದಿಶೇಷನೇ ಶ್ರೀ ವರವರಮುನಿಯಾಗಿ ಅವತರಿಸಿ ಎಪ್ಪತ್ತು ಮೂರು ವರ್ಷಗಳಕಾಲ ನೆಲೆಸಿದ್ದು ತಮ್ಮ ಈಕ್ಷಣ ಧ್ಯಾನ ಸಂಸ್ಪರ್ಶಾಭಿಮಾನಾದಿ ವಿಶೇಷಗಳಿಂದ ತಮ್ಮ ಹತ್ತಿರಇದ್ದವರೂ ದೂರಇದ್ದವರೂ ಸಮಕಾಲೀನರೂ ಉತ್ತರಕಾಲೀನರೂ ಎಲ್ಲರೂ ಉಜ್ಜೀವಿಸುವಂತೆಮಾಡಿ, ಭೂತಲವೇ ವೈಕುಂಠವೆನ್ನುವಂತೆ (ಸಂಸಾರ ಪರಮಪದಗಳಿಗೆ ಭೇದವಿಲ್ಲದಂತೆ)

ಮಾಡಿ, ತಮ್ಮ ಅವತಾರಕಾರ್ಯವನ್ನು ಮುಗಿಸಿದರು. ಇಲ್ಲಿ ಕರ್ತವ್ಯಾಂಶ ವಾವುದೂ ಇಲ್ಲದೆ ಇರುವುದರಿಂದ ಪರಮಪದನಾಥನಿಗೆ ಸರ್ವವಿಧವಾದ ಕೈಂ ಕರ್ಯವನ್ನುಮಾಡಲು ಮಾಮುನಿಗಳಿಗೆ ಪರಮಪದಕ್ಕೆ ಹೋಗಲು ಆಸೆಯಾ ಯಿತು. ಆಗ ಅವರಿಗೆ ದೇಹ ದೌರ್ಬಲ್ಯವುಂಟಾಗಿ, ಮೈ ಚೆನ್ನಾಗಿರಲಿಲ್ಲ. ಅವ ರಿಗೆ ಸಂಚಾರ ಮಾಡಲು ಆಗದಿದ್ದರೂ ಭಗವತ್ಸಂಪರ್ಶನಾಪೇಕ್ಷೆಯಾಯಿತು. ಸತ್ಸಂಬಂಧವೇ ಹಿತವೆಂದು ತೋರಿಸಿ ಶಿಷ್ಟಾಚಾರವನ್ನು ಸ್ಥಾಪಿಸಲು ಶ್ರೀರಂಗ ನಾಥನೇ ಮಠದ ಬಾಗಿಲಿಗೆ ಬಂದು ತನ್ನ ಸೇವೆಯನ್ನಿತ್ತನು. ಕೊಂಚಕಾಲ ವಾದಮೇಲೆ ಜೀಯರ್ ದೇಹ ಬಹು ಶಿಥಿಲವಾಯಿತು; ಆಗ ತಮ್ಮ ಶಿಷ್ಯ ರಿಗೆಲ್ಲಾ ಅವರು ಬೇಗ ಬರುವಂತೆ ಶ್ರೀ ಮುಖವನ್ನು ಕಳುಹಿಸಿದರು. ಬಂದ ಶಿಷ್ಯರ ಸಮಾಗಮದಿಂದ ಮಾಮುನಿಗಳವರ ದೇಹದ ಗ್ಲಾನಿ ಕೊಂಚತೀರಿತು. ಅದನ್ನು ಕಂಡು ವಾನಮಾಮಲೈ ಜೀಯರ್ ಸ್ವಸ್ಥಾನಕ್ಕೆ ಹಿಂತಿರುಗಿದರು.

ಕೆಲವು ದಿನಗಳಾದಮೇಲೆ ಮೊದಲಿನಂತೆ ದೇಹ ದೌರ್ಬಲ್ಯದಿಂದ ಪ್ರಾಪ್ಯ ಭೂಮಿಯಲ್ಲಿ ಪ್ರಾವಣ್ಯವೂ ತ್ಯಾಜ್ಯವಾದ ಈ ಸಂಸಾರದಲ್ಲಿ ಜಿಹಾಸೆಯೂ ಭಗವದನುಭವವಿಲ್ಲದೆ ಆತ್ಮಧಾರಣಾಯೋಗ್ಯತೆಯೂ ಮಾಮುನಿಗಳಿಗೆ ಹೆಚ್ಚುತ್ತಾ ಬಂದಂತೆ ಪ್ರಾಪ್ತಶೇಷಿಯಾದ ಯತಿರಾಜ ರಾಮಾನುಜರಲ್ಲಿ ಪ್ರಾವಣ್ಯ ಹೆಚ್ಚಿತು. ರಾಮಾನುಜರ ಸಿರಿಯಡಿಗಳಲ್ಲಿ ಪರಮಭಕ್ತಿಯುಂಟಾಗಿ ವರವರಮುನಿಗಳು" ಈ ಸಂಸಾರಬಂಧವನ್ನು ಕಳೆದು ತಮ್ಮ ಬಳಿಗೆ ಕರೆದು ಕೊಳ್ಳುವಂತೆ" ಪ್ರಾರ್ಥಿಸಿದ ಅರವತ್ತು ಪದ್ಯಗಳುಸೇರಿ "ಆರ್ತಿಪ್ರಬಂಧ"ವಾಗಿದೆ.

ಶ್ರೀ ವರವರಮುನಿಗಳ ಚರಮಕಾಲದಲ್ಲಿ ಮೇಲ್ ನಾಡ್ ತೋಳ.ಪ್ಪರ್ ಮತ್ತು ಅವರ ಅಣ್ಣಂದಿರು ಶ್ರೀರಂಗಕ್ಕೆ ದೇವರಸೇವೆಗೆ ಬಂದಿದ್ದರು; ಅವ ರನ್ನು ಪಟ್ಟರ್ ಪಿರ್ರಾ ಜೀಯರ್ ಕಂಡು ವಿಚಾರಿಸಿ "ಜ್ಞಾನಭಕ್ತ್ಯಾದಿ ಗಳೇ ಮೈವೆತ್ತಂತಿರುವ" ಯತಿರಾಜರ ಪುನರವತಾರವಾದ ಶ್ರೀ ವರವರ ಮುನಿಗಳನ್ನು ಸೇವಿಸುವಂತೆ ಹೇಳಿದರು. ಹಾಗೆಯೇ ಅವರು ಬಂದು ಮಣವಾಳ ಮಾಮುನಿಗಳ ಪಾದಕಮಲಗಳಿಗೆರಗಿದರು; ಜೀಯರ್ ಅವರನ್ನು ಅಮಲ ಕಟಾಕ್ಷಗಳಿಂದ ನೋಡಿ ಅನುಗ್ರಹಿಸಿದರು. ರಾಮಾನುಜರ ಧ್ಯಾನ ಮಗ್ನರಾಗಿದ್ದ ಮಾಮುನಿಗಳು ಇವರನ್ನು ಕಂಡು ರಾಮಾನುಜಾಚಾರ್ಯರ

ವಿಶೇಷಾಭಿಮಾನಕ್ಕೆ ಪಾತ್ರವಾದ ತಿರುನಾರಾಯಣಪುರವನ್ನು ಸ್ಮರಿಸಿ ಇಂತೆಂದರು: ಪರಮಾಚಾರ್ಯರಾದ ರಾಮಾನುಜಾಚಾರ್ಯರು ಚರಮಕಾಲದಲ್ಲಿ ಹೇಳಿದ ಮಾತುಗಳಲ್ಲಿ ನಾಲ್ಕನೆಯವಾದ ಶ್ರೀಯದುಶೈಲನಿತ್ಯವಾಸವನ್ನು ಮಾಡುವವರು ಸತ್ಪುರುಷರು, ಮಹಾತ್ಮರಾಗುವರು ಎಂಬ ಶ್ಲೋಕದಂತೆ "ತಿರುನಾರಾಯಣಪುರದಲ್ಲಿ ನಿತ್ಯವಾಸ ಮಾಡುವವರು ನಮ್ಮ ಶಿಷ್ಯರಲ್ಲಿ ಒಬ್ಬರೂ ಇಲ್ಲವಲ್ಲಾ"! ಎಂದರು. ಆಗ ತೋಳಪ್ಪರ್ ಆ ಕೈಂಕರ್ಯವನ್ನು ಪ್ರಾರ್ಥಿಸಲು ಜೀಯರ್ ಬಹು ಸಂತೋಷಪಟ್ಟು ಅವರಿಗೆ ಇಂತು ಅಪ್ಪಣೆ ಮಾಡಿದರು: ರಾಮಾನುಜಾಚಾರ್ಯರಿಗೂ ನಮಗೂ ಸಂತೋಷವಾಗುವಂತೆ ಯತಿರಾಜಕುಮಾರರಿಗೆ ಸೇವೆಮಾಡುತ್ತಾ ಮಂಗಳಾಶಾಸನಪರರಾಗಿ ಯದುಗಿರಿಯಲ್ಲಿ ನಿತ್ಯವಾಸ ಮಾಡುತ್ತಾ ಇರಿ.

ರಾಮಾನುಜರ ವಿಶೇಷಾಭಿಮಾನಕ್ಕೆ ಪಾತ್ರರಾದ ತಿರುಮಲೈನಲ್ಲಾರ್ ಎಂಬ ಆಚಾರ್ಯಪುರುಷರ ವಂಶದವರೂ ಪರಮತಗಳನ್ನು ಖಂಡಿಸುತ್ತಾ ಸ್ವಮತಸ್ಥಾಪನ ಧುರೀಣರೂ ಆದ ಅಣ್ಣರಾಯ ಚಕ್ರವರ್ತಿ ಎಂಬವರೂ ಶ್ರೀರಂಗಕ್ಕೆ ನಾನಾದೇಶಗಳಿಂದ ಜೀಯರನ್ನು ಅಂತಿಮದಶೆಯಲ್ಲಿ ದರ್ಶಿಸಲು ಬಂದಿದ್ದ ಜನರನ್ನು ಕಂಡು ವಿಚಾರಿಸಿ ಜೀಯರನ್ನು ತಮ್ಮ ಬಂಧುಗಳೊಡನೆ ಪಟ್ಟರ್‌ಪಿರ್ರಾ ಜೀಯರ್ ಮೂಲಕ ಆಶ್ರಯಿಸಿದರು. ಜೀಯರ್ ಅಪ್ಪಣೆಯಂತೆ ಅವರಿಗೆ ಬಲಗೈಯಂತಿದ್ದ ಪಟ್ಟರ್ ಪಿರ್ರಾ ಜೀಯರ್‌ಪಂಚ ಸಂಸ್ಕಾರಗಳನ್ನು ಮಾಡಿದರು. ಆಮೇಲೆ ಜೀಯರ್ ಅಪ್ಪಿಳ್ಳಾರ್ ಮತ್ತು ಜೀಯರ್ ನಾಯನಾರ್ ಪ್ರಾರ್ಥನೆಯಂತೆ ತಮ್ಮಂತಿರುವ ಎರಡು ಅರ್ಚಾ ಮೂರ್ತಿಗಳನ್ನು ಮಾಡಿಸಲು ಅನುಮತಿಯಿತ್ತರು. ತಮ್ಮ ಶಿಷ್ಯರಲ್ಲಿ ಎಲ್ಲರನ್ನೂ ಒಬ್ಬೊಬ್ಬರಾಗಿ ಕರೆಯಿಸಿ ಅವರಿಗೆ ಬೇಕಾದ ಹಿತಾಂಶಗಳನ್ನೆಲ್ಲಾ ತಿಳಿಸಿ ಅನುಗ್ರಹಿಸಿದರು.

ಪರಮಪದಕ್ಕೆ ಹೋಗಲು ನಾಲ್ಕುದಿನಗಳು ಮುಂಚಿತವಾಗಿ ಜೀಯರ್ ನಾಯನಾರ್ ಮೊದಲಾದ ತಮ್ಮ ಶಿಷ್ಯರಿಗೆ ನಾಲ್ಕುಸಾವಿರ ದಿವ್ಯ ಪ್ರಬಂಧ ಪಾರಾಯಣವನ್ನು ಮಾಡುವಂತೆ ಅಪ್ಪಣೆಮಾಡಿದರು. ಅದನ್ನೆಲ್ಲಾ ಆದರದಿಂದ ಕೇಳಿ ಶ್ರೀ ಜೀಯರ್ ಸಂತೋಷಪಟ್ಟು ತಿರುಮಂಗೈಯಾಳ್ವಾರ್ ಹಾಡಿ

ರುವಂತೆ "ವಳರ್ತ್ತತದನಾಲ್ ಪರ್ಯಪೆತ್ತೇ" ಎಂದುಹೇಳುತ್ತಾ ಆಗೋಷ್ಠಿಗೆ ಕೈಮುಗಿದು ವಂದಿಸಿದರು. ಆಮೇಲೆ ತಿರುವಾಯ್ಮೊಳಿ. ಅನುಭವದಲ್ಲಿ ಮಗ್ನ ರಾಗಿ ಅದರ ವ್ಯಾಖ್ಯಾನರತ್ನವಾದ ಈಡು ಮುಪ್ಪತ್ತಾರಾಯಿರದ ರಸಾನು ಭವದಲ್ಲಿ ಪರವಶರಾದರು. ರುಧಿರೋದ್ಗಾರಿ ಸಂವತ್ಸರದ ಕುಂಭಮಾಸ ಕೃಷ್ಣ ದ್ವಾದಶೀ ಶನಿವಾರ ಶ್ರವಣ ನಕ್ಷತ್ರದದಿವಸ "ಮರುಳೊಳಿ. ನೀಮಡನೆಂಜೇ" ಎಂಬ ತಿರುವಾಯ್ಮೊಳಿ.ಯ ೯೬ನೇ ಗೀತೆಯದಶೆ ಜೀಯರಿಗೆ ಉಂಟಾಯಿತು. ಅಂದು ಬೆಳಿಗ್ಗೆ ಶ್ರೀ ವರವರಮುನಿಗಳು ನಿತ್ಯಾನುಷ್ಠಾನವನ್ನು ಮಾಡಿ ಶ್ರೀ ರಂಗನಾಥನ ಮಂದಿರದ ಅನ್ತರಂಗ ಸೇವಾಪರರನ್ನೆಲ್ಲಾ ಕರೆಯಿಸಿ ತಮ್ಮ "ಸರ್ವಾಪರಾಧಗಳನ್ನೂ ಕ್ಷಮಿಸುವಂತೆ" ಪ್ರಾರ್ಥಿಸಿದರು. ಅವರಿಗೆ ಇಂತೆಂದರು:—

ಶ್ರೀರಂಗನಾಥನ ಶ್ರೀಕಾರ್ಯವನ್ನೆಲ್ಲಾ ರಾಮಾನುಜಾಚಾರ್ಯರವರ ದಿವ್ಯಾಜ್ಞೆಯಂತೆ ಯಾವ ಲೋಪ (ಕೊರತೆವೂ) ಇಲ್ಲದಂತೆ ನಡೆಸಿಕೊಂಡುಬರುತ್ತಾ ಶ್ರೀವೈಷ್ಣರನ್ನು ಆದರಿಸುತ್ತಾ ಬನ್ನಿರಿ". ಆಮೇಲೆ ಜೀಯರ್ ತಮ್ಮ ತಿರುವಾರಾಧನ ಮೂರ್ತಿಗಳನ್ನೂ ಶ್ರೀ ಕೋಶಗಳನ್ನೂ ಮಠ ಮೊದಲಾದ ಸರ್ವಸ್ವವನ್ನೂ ಶ್ರೀರಂಗನಾಥನಿಗೆ ಸಮರ್ಪಿಸಿದರು; ಶ್ರೀ ವೈಷ್ಣವಸಮಾರಾಧನೆಮಾಡಿ ಅವರ ಶ್ರೀ ಪಾದತೀರ್ಥವನ್ನು ಸ್ವೀಕರಿಸಿದರು ; ತಮ್ಮ ಅಪರಾಧಗಳನ್ನು ಕ್ಷಮಿಸುವಂತೆ ಬೇಡಿದರು.

ಹಣ್ಣುತುಂಬಿದ ಮರವನ್ನು ಹಕ್ಕಿಗಳ ಹಿಂಡು ಕಾಯುತ್ತಿರುವಂತೆ ಶಿಷ್ಯಮಂಡಲಿ ಕೈಮುಗಿದುಕೊಂಡು ಜೀಯರ್ ದಿವ್ಯ ಮಂಗಳ ವಿಗ್ರಹವನ್ನೇ ನೋಡುತ್ತಿರುವಲ್ಲಿ, ಸೂರ್ಯಾಸ್ತಮಯವಾದೊಡನೆ ಸಾಯಂಸಂಧ್ಯಾವಂದನೆಯನ್ನುಮಾಡಿ "ಪಿಳ್ಳೈ ತಿರುವಡಿಹಳೇ ಶರಣಂ" ವಾಳಿ. ಯುಲಹಾಶಿರಿಯನ್" ಎಂದು ಹೇಳಿ ಸ್ವಾಚಾರ್ಯರನ್ನು ಧ್ಯಾನಿಸುತ್ತಾ ಹಾಸಿಗೆಯಲ್ಲಿ ಒರಗಿಕೊಂಡು ಕುಳಿತರು. ಆಮೇಲೆ ಶಿಷ್ಯರೆಲ್ಲರೂ ಕೈಮುಗಿದು ನಮಿಸಿ ಬ್ರಹ್ಮವಲ್ಲಿ, ಭೃಗುವಲ್ಲಿ, ಶೂಳ್.ವಿಶುಂಬಣಿಮುಹಿಲ್, ಅರ್ಚಿರಾದಿ, ಸೂತ್ರಂದಾದಿಗಳನ್ನು ಅನುಸಂಧಾನ ಮಾಡುತ್ತಾ ಇದ್ದರು. "ಅಂಗಯಲ್ ಪಾಯ್ವಯಲ್ ತೆನ್ನರಂಗರ್" ಎಂಬ ಪಾಶುರವನ್ನು ಶ್ರೀವೈಷ್ಣವರು ಅನುಸಂಧಾನ ಮಾಡುವುದನ್ನು ಕೇಳಿ ಜೀಯರ್ ಕೈಮುಗಿಯುತ್ತಾ "ಎಂಬೆರುಮಾನಾರ್

ತಿರುವಡಿಹಳೇ ಶರಣಂ" ಎಂದು ಹೇಳಿ ರಾಮಾನುಜರ ಚಿಂತೆಯಲ್ಲಿ ಮಗ್ನರಾದರು. ಆಮೇಲೆ ವೈನತೇಯನ ಮೇಲೇರಿ ಬಂದು ಮುಖವನ್ನು ತೋರಿಸಿ ಶ್ರೀರಂಗನಾಥನು ಜೀಯರಿಗೆ ಸಂದರ್ಶನವಿತ್ತು ಸತ್ಕರಿಸಿದನು.

"ಉನ್‌ಶರಣಂ ತನ್ದ್ರೆ ಶಸ್ಮಂಕಳ್ಳೈಯೂಯ್" ಎಂದು ಇವರು ಪ್ರಾರ್ಥಿಸಿದಮೇಲೆ ಸುಷುಮ್ನಾ ನಾಡಿಯ ಬಾಗಿಲಿನಲ್ಲಿ ಹೊರಟು ಬ್ರಹ್ಮರಂಧ್ರದ ಮೂಲಕ ಸಿರಿನಾಡಿಗೆ ತೆರಳಿದರು. ಶ್ರೀರಂಗನಾಥನಿಗೂ ಆಚಾರ್ಯರ ವಿಯೋಗದಿಂದ ಬೇಸರವಾಯಿತೇನೋ? ಶಿಷ್ಯರೆಲ್ಲರೂ "ಅಯ್ಯೋ! ಕಣ್ಣಿಪಿರ್ರಾ ಅರ್ರೈಯೋ!" ಎಂದು ಮೊರೆಯಿಟ್ಟು ಗೋಳಾಡಿದರು. ಪಕ್ಕದಲ್ಲಿದ್ದ ಜನರು ಸಮಾಧಾನಪಡಿಸಿದಮೇಲೆ ಜೀಯರ್ ಅಂತರಂಗಶಿಷ್ಯರೆಲ್ಲರೂ ಜೀಯರ್ ನಾಯನಾರ್‌ಅವನ್ನು ಮುಂದಿಟ್ಟುಕೊಂಡು ಕಾವೇರಿಯಿಂದ ತಿರುಮಂಜನವನ್ನು ತಂದು ಶ್ರೀ ವರವರಮುನಿಗಳ ವಿಮಲಚರಮವಿಗ್ರಹಕ್ಕೆ ಅಭಿಷೇಕ ಮಾಡಿ ಹೊಸ ವಸ್ತ್ರಗಳನ್ನೂ ದ್ವಾದಶೋರ್ಧ್ವಪುಂಡ್ರಗಳನ್ನೂ ಧರಿಸಿ ತಮಗೆ ಆಪದ್ಧನವಾದ ಶ್ರೀಪಾದ ತೀರ್ಥ ತಿರುವಡಿ ನಿಲೈಗಳನ್ನು ಸಂಗ್ರಹಿಸಿಕೊಂಡು ಒಂದು ದಿವ್ಯ ಸಿಂಹಾಸನದಲ್ಲಿ ಬಿಜಮಾಡಿಸಿ ಆ ಚರಮ ವಿಗ್ರಹಾನುಭವವನ್ನು ಮಾಡುತ್ತಿದ್ದರು. ಆಮೇಲೆ ಸಕಲ ಮರ್ಯಾದೆಗಳೊಡನೆ ಶ್ರೀರಂಗನಾಥನ ಸನ್ನಿಧಿಯಿಂದ ತಂದ ಶೇಷವಸ್ತ್ರ ತಿರುಮಾಲೈ ಪ್ರಸಾದಗಳನ್ನು ಜೀಯರಿಗೆ ಸಮರ್ಪಿಸಿ ಅಲಂಕರಿಸಿದ ಮೇಲೆ ಅಲ್ಲಿ ನೆರೆದಿದ್ದ ಶ್ರೀ ವೈಷ್ಣವರುಗಳೂ ಶಿಷ್ಯಮಂಡಲಿಯೂ ಶ್ರೀರಂಗದ ನಿವಾಸಿಗಳೂ "ಶೆಯ್ಯತಾಮರೈತ್ತಾಳಿಣೈವಾಳಿ. ಯೇ" ಎಂದು ಮೊದಲಾಗುವ ಮಂಗಳಾಶಾಸನ ಪದ್ಯವನ್ನು ಹಾಡಿದರು. ಆಳವಂದಾರ್ ಎಂಬೆರುಮಾನಾರ್ ಮೊದಲಾದ ಯತಿವರ್ಯರಿಗೆ ಮಾಡಿದಂತೆ ಶ್ರೀಚೂರ್ಣಪರಿಪಾಲನ, ಇಯಲ್ ಗೋಷ್ಠೀ ಇತ್ಯಾದಿ ವೈಭವದೊಡನೆ ಯತಿ ಸಂಸ್ಕಾರವನ್ನು ಶ್ರೀ ವರವರಮುನಿಗಳಿಗೆ ವಿಧಿವತ್ತಾಗಿ ಮಾಡಿದರು. ಎಲ್ಲರೂ ಅವಭೃತಸ್ನಾನ ಮಾಡಿದರು. ಮಣವಾಳಮಾಮುನಿಗಳ ವೈಭವಕ್ಕೆ ತಕ್ಕಂತೆ ಪೆರಿಯತಿರುವಧ್ಯಯನಂ ಎಂಬ ಮಹೋತ್ಸವವನ್ನು ನಡೆಸಿ, ತೀರ್ಥ ಪ್ರಸಾದಗಳನ್ನು ಸ್ವೀಕರಿಸಿ, ಶಿಷ್ಯರೆಲ್ಲರೂ ಜೀಯರ್ ತಮಗೆ ನಿಯಮಿಸಿದ್ದ ಕೈಂಕರ್ಯಗಳನ್ನು ಮಾಡುತ್ತಾಬಂದರು. ಈ ಆಚಾರ್ಯರ ಚರಮಶ್ಲೋಕವನ್ನು ಅಂತರಂಗಶಿಷ್ಯರು ದೇಶಾಂತರಗಳಿಗೆ ಕಳುಹಿಸಿಕೊಟ್ಟರು.

ಕುಂಭಂ ಭಾಸ್ವತಿ ಯಾತಿ ತತ್ಸುತದಿನೇ ಪಕ್ಷೇ ವಳರ್‌ಕ್ಷೇತರೇ
ದ್ವಾದಶ್ಯಾಂ ಶ್ರವಣರ್ಕ್ಷಭಾಜಿ ರುಧಿರೋದ್ಗಾರ್ಯಾಖ್ಯ ಸಂವತ್ಸರೇ |
ಧೀಭಕ್ತ್ಯಾದಿ ಗುಣಾರ್ಣವೋ ಯತಿವರಾಧೀನಾ ಖಿಲಾತ್ಮ ಸ್ಥಿತಿಃ
ಶ್ರೀವೈಕುಂಠ ಮಕುಂಠ ವೈಭವ ಮಗಾತ್ ಕಾನ್ತೋಪಯನ್ತಾಮುನಿಃ||

ಶ್ರೀರಂಗದಲ್ಲಿ ಇಂದಿಗೂ ಈ "ತೀರ್ಥ ಉತ್ಸವ" ಜರುಗುತ್ತದೆ. ಶ್ರೀರಂಗ ನಾಥನಿಗೆ ನಿವೇದನವಾದ ತಳಿಗೆಯೆಲ್ಲಾ ಸಮಸ್ತ ಮರ್ಯಾದೆಗಳೊಡನೆ ಜೀಯರ್ ಸನ್ನಿಧಿಗೆ ಮೆರವಣಿಗೆಯಲ್ಲಿ ಬಂದಮೇಲೆ ಮಣವಾಳ ಮಾಮುನಿ ಗಳವರಿಗೆ ಸಮರ್ಪಣೆಯಾಗಿ ಗೋಷ್ಠಿಗೆ ವಿನಿಯೋಗವಾಗುತ್ತದೆ.

ಶ್ರೀರಂಗದ ಜನರು ಶ್ರೀರಂಗರಾಜನ ದಿವ್ಯಾಜ್ಞೆಯಂತೆ ಜೀಯರ್ ನಾಯನಾರನ್ನು ಜೀಯರ್ ಮಠಕ್ಕೆ ಉತ್ತರಾಧಿಕಾರಿಯಾಗಿ ನಿಯಮಿಸಿದರು. ನಾಯನಾರಿಗೆ ಕಂದಾಡೈಯಣ್ಣನ್ ತಿರುವಾಯ್ಮೊಳಿ. ಈಡನ್ನೂ ಪ್ರತಿವಾದಿ ಭಯಂಕರಂ ಅಣ್ಣಾ ಶ್ರೀ ಭಾಷ್ಯವನ್ನೂ ಆಚಾರ್ಯ ನಿಯಮನದಂತೆ ಉಪ ದೇಶಿಸಿದರು. ಜೀಯರ್ ಶಿಷ್ಯರೆಲ್ಲರೂ ನಾಯನಾರನ್ನು ಅನುವರ್ತಿಸಿ ಶ್ರೀರಂಗಶ್ರೀ ಸಂವರ್ಧಿಸುವಂತೆ ನೋಡಿಕೊಂಡುಬಂದರು. ಅಷ್ಟ ದಿಗ್ಗಜ ಗಳು ಜೀಯರ್ ನಿಯಮನದಂತೆ ಅಲ್ಲಲ್ಲಿ ದರ್ಶನ ಪ್ರಚಾರವನ್ನು ಮಾಡಿ ಕೊಂಡು ಬಂದರು. ಆಚಾರ್ಯ ಪರತಂತ್ರರಾದ ಪಟ್ಟರ್ ಪಿರಾನ್ ಜೀಯರ್ ಸಿರಿಯಡಿಗಳನ್ನು ಆಶ್ರಯಿಸಿದ ತಿರುವರಂಗದಾಸರ್ ಎಂಬ ಮೇಲ್ನಾಡ್ ತೋಳ. ಪ್ಪರ್ ಮತ್ತು ಅವರ ಅಣ್ಣಂದಿರು ಆಳ. ಹಿಯಮಣವಾಳ ದಾಸ ನಾಯನಾರ್ ಎಂಬವರೂ ಜೀಯರ್ ನಿಯಮನದಂತೆ ಶ್ರೀರಂಗನಾಥನ ಅನುಮತಿಯೊಡನೆ ತಿರುನಾರಾಯಣಪುರಂ (ಮೇಲುಕೋಟೆ, ಶ್ರೀ ಯಾದು ಶೈಲ ದಿವ್ಯ ದೇಶಕ್ಕೆ ಬಂದು ಅಲ್ಲಿ 'ತಾಮುಹಂದತಿರುಮೇನಿಯಾಗಿ ವಿಭ ವಾರ್ಚಾ ರೂಪಿಯಾಗಿ ಶ್ರೀಯಾದವಾದ್ರೀಶನ ನಿತ್ಯಕೈಂಕರ್ಯಪರಾಯಣ ರಾಗಿ ಬಿಜಮಾಡಿಸಿರುವ ಶ್ರೀ ರಾಮಾನುಜಾಚಾರ್ಯರಿಗೂ ಯತಿರಾಜ ಸಂಪತ್ಕುಮಾರಸ್ವಾಮಿಗೂ ಶ್ರೀ ತಿರುನಾರಾಯಣಸ್ವಾಮಿಗೂ ನಂದನವನ ಮೊದಲಾದ ಎಲ್ಲಾ ಸೇವೆಗಳನ್ನೂ ಮಾಡಿಕೊಂಡು ಅಲ್ಲಿದ್ದ ಅನೇಕರನ್ನು ಜೀಯರ ಅಭಿಮಾನಾನ್ತರ್ಭೂತರಾಗುವಂತೆಮಾಡಿ ಶ್ರೀಶೈಲಕ್ಕೆ ಪಶ್ಚಿಮ

ದಿಕ್ಕಿನಲ್ಲಿಯೂ "ಶ್ರೀಶೈಲೇಶದಯಾಪಾತ್ರರ" ವೈಭವವನ್ನು ಹರಡುತ್ತಾ ನೆಲೆಸಿದ್ದರು; ಅವರ ಮಕ್ಕಳೂ ಆ ಕೈಂಕರ್ಯವನ್ನು ಮಾಡುತ್ತಾ ಅಲ್ಲಿಯೇ ಇದ್ದರು.

"ಎರುಂಬಿಯಪ್ಪಾ"ವಿಗೆ ಆಚಾರ್ಯವಿಯೋಗದಿಂದ ಬಹು ದುಃಖ ವಾಯಿತು. "ಆಚಾರ್ಯ ಕೈಂಕರ್ಯವೇ ಪರಮ ಪುರುಷಾರ್ಥ;" ಅವರ ಸೇವೆಯನ್ನಾಗಲಿ ಭಗವದ್ಭಕ್ತರ ಸೇವೆಯನ್ನಾಗಲಿ ಮಾಡದ ದೇಹವನ್ನು ಆದ ರಿಸಬಾರದು ಎಂದು ನಂಬಿದ್ದ ಅವರು ಶ್ರೀ ವರವರಮುನಿಗಳ ಗುಣಾನುಭವ ಪರರಾಗಿ, ಅವರನ್ನಗಲಿರುವ ಸ್ಥಿತಿ ರಾಮನನ್ನಗಲಿ ಸೀತೆ ಲಂಕೆಯಲ್ಲಿದ್ದಂತೆ ಎಂದು ಎಣಿಸಿ, ಬಹಳ ಆರ್ತಿಯಿಂದ ಇದ್ದರು.

ಹೀಗೆ ಶ್ರೀವರವರಮುನಿವರ್ಯರ ಸಿರಿಯಡಿಗಳನ್ನು ಆಶ್ರಯಿಸಿದ ಶಿಷ್ಯ ರೆಲ್ಲರೂ "ಆಚಾರ್ಯಾಭಿಮಾನನಿಷ್ಠರಾಗಿ" "ಯತೀನ್ದ್ರಪ್ರವಣ"ರಾದ "ಜೀಯರ್ ಸಿರಿಯಡಿಗಳೇ ನಮಗೆ ಶರಣವೆಂದು" ತಮ್ಮ ಶಿಷ್ಯರಿಗೂ ಮಕ್ಕ ಳಿಗೂ ಉಪದೇಶಿಸಿದರು. ಅದರಂತೆ ಅವರೆಲ್ಲರೂ "ವರವರಮುನಿಭೃತ್ಯ"ರಾಗಿ ಅರಿಷಡ್ವರ್ಗಗಳನ್ನು ಜಯಿಸಿ, ಪರಮಾರ್ಥವನ್ನರಿತು, ಆಸ್ತಿಕಾಗ್ರೇಸರರಾಗಿ, "ಅನ್ತಿಮೋಪಾಯನಿಷ್ಠರಾಗಿ" ಸಂಸಾರವನ್ನೇ ವೈಕುಂಠವಾಗಿಮಾಡಿ "ಆಚಾರ್ಯಮುಖೋಲ್ಲಾಸರೂಪ" "ಕೈಂಕರ್ಯಪರಾಯಣರಾಗಿ" ಬಾಳಿ ಬೆಳಗುತ್ತಿದ್ದರು. ಇತಿ ಶ್ರೀ ವರವರಮುನಿ ಚರಿತಸಾರಾಮೃತಂ.

## ಶ್ರೀವರವರಮುನಿಗಳ ಶ್ರೀ ಸೂಕ್ತಿಮುಕ್ತಾವಳಿ

1. "ರಹಸ್ಯತ್ರಯ"ದ ಶಬ್ದ ಸುಗ್ರಹವಾಗಿದ್ದರೂ ಅದರ ಅರ್ಥವನ್ನು ಉಪದೇಶದಿಂದಲೇ ತಿಳಿಯಬೇಕು. ಅದನ್ನರಿತೇ ಎಲ್ಲರೂ ಉಜ್ಜೀವಿಸಬೇಕು. ಆದುದರಿಂದ ಆ ರಹಸ್ಯತ್ರಯದ ಪೂರ್ವಾಚಾರ್ಯೋಪದೇಶ ಪರಂಪರಾ ಪ್ರಾಪ್ತವಾದ ಅರ್ಥ ವಿಶೇಷಗಳನ್ನು ಎಲ್ಲರಿಗೂ ಸಂಗ್ರಹವಾಗಿಯೂ ಸುವ್ಯಕ್ತ ವಾಗಿಯೂ ಇರುವಂತೆ "ಪಿಳ್ಳೈಲೋಕಾಚಾರ್ಯರು" ತಮ್ಮ ಪರಮಕೃಪೆ ಯಿಂದ "ಮುಮುಕ್ಷುಪ್ಪಡಿ" ಎಂಬ ಪ್ರಬಂಧದ ಮೂಲಕ ತಿಳಿಸಿ ಉಪಕರಿಸಿ ರುವರು.

2. "ತಿರುಮನ್ತ್ರಂ" "ಎಂಬ ಮೂಲಮನ್ತ್ರ" "ಪ್ರಾಪ್ಯಪರ"ವಾಗಿದೆ. "ಚರಮಶ್ಲೋಕ ಪ್ರಾಪಕ" ಪರವಾಗಿದೆ. ದ್ವಯಂ (ಎಂಬ ಶರಣಾಗತಿ ಮನ್ತ್ರ) ಎರಡರ ಅನುಷ್ಠಾನವನ್ನೂ ಪ್ರತಿಪಾದಿಸುತ್ತದೆ.

೩. ಪಂಚಮವೇದ ಸಾರಭೂತ "ಗೀತೋಪನಿಷತ್" "ತಾತ್ಪರ್ಯ"ವಾಗಿಯೂ "ಚರಮರಹಸ್ಯ"ವಾಗಿಯೂ ಇರುವ ಚರಮಶ್ಲೋಕದ ಅರ್ಥವನ್ನು ಕೇಳುವುದಕ್ಕಾಗಿಯೇ "ಎಂಬೆರುಮಾನಾರ್" (ಸ್ವಾಮಿ ರಾಮಾನುಜಾಚಾರ್ಯರು,)ಹದಿನೆಂಟು ಸಲ "ತಿರುಕ್ಕೋಟ್ಟಿಯೂರ್ ನಂಬಿ" ಶ್ರೀ(ಗೋಷ್ಠೀಪೂರ್ಣ)ಗಳ ಬಳಿ ದಯಮಾಡಿಸಿದ್ದರು. ಸಂಸಾರಿಗಳ ದುರ್ಗತಿಯನ್ನು ಕಂಡು ಸಹಿಸಲಾರದೆ ಇರುವಂತೆ ಕೃಪೆ ಉತ್ಕಟವಾಗಿದ್ದ ಅವರು "ಕೃಪಾಮಾತ್ರ ಪ್ರಸನ್ನಾಚಾರ್ಯರಾಗಿ" ಬೆಳಗಿದರು. ಈ ಮನ್ತ್ರದ ಅರ್ಥಗೌರವವನ್ನೂ. ನೋಡದೆ, ಸಂಸಾರಿಗಳ ಅನರ್ಥವನ್ನೇ ನೋಡಿ (ಮರುಗಿ) ಅದನ್ನು ಪ್ರಕಟಿಸಿದರು [ಬಹಿರಂಗಪಡಿಸಿದರು]. ಈ ಅರ್ಥವನ್ನೆಲ್ಲರೂ ಅರಿತು ಉಜ್ಜೀವಿಸಬೇಕು ಎನ್ನುವ ಪರಮ ಕೃಪೆಯಿಂದಲೇ ಇದನ್ನು ಲೋಕಾಚಾರ್ಯರು ಹಲವು ಪ್ರಬಂಧಗಳಲ್ಲಿ ಸಂಗ್ರಹ ವಿಸ್ತಾರರೂಪವಾಗಿ ತಿಳಿಸಿರುವರು.

ಆಕರ : "ತಿರುಮನ್ತ್ರಾರ್ಥಂ"

೪. ನಿರಹಂಕಾರರಾಗಿ ಪರಸಮೃದ್ಧಿಪ್ರಿಯರಾಗಿದ್ದ ಖ್ಯಾತಿಲಾಭಾದಿ ನಿರಪೇಕ್ಷರಾದ ಪೂರ್ವಾಚಾರ್ಯರುಗಳಲ್ಲಿ ಹಲವರು ನಾನಾ ಪ್ರಬಂಧಗಳನ್ನು ರಚಿಸಿರುವುದರ ತಾತ್ಪರ್ಯವೇನು? ಒಬ್ಬರು ರಚಿಸಿದ ಪ್ರಬಂಧವನ್ನೇ ಉಳಿದವರೆಲ್ಲರೂ ಪ್ರವಚನ ಮಾಡಿ ಪರಿಪಾಲಿಸಿದರೆ ಸಾಲದೋ ? ಎಂಬ ಪ್ರಶ್ನೆಗೆ ಉತ್ತರವಿದು :- ಆಳ್ವಾರುಗಳೆಲ್ಲರೂ ಏಕಕಂಠರಾಗಿ ಹೇಳಿದುದರಿಂದ ಅರ್ಥಕ್ಕೆ ಆಪ್ತತೆ ಸಿದ್ಧವಾಯಿತು; ಅದರಂತೆ ಹಲವರು ಆಚಾರ್ಯರುಗಳು "ಏಕಕಂಠವಾಗಿ ಉಪದೇಶಿಸಿದ ಅರ್ಥವಿದು" ಎಂದು ಮಂದಮತಿಗಳೂ ನಂಬುವುದಕ್ಕಾಗಿಯೇ ಅನೇಕರು ಗ್ರಂಥನಿರ್ಮಾಣ ಮಾಡಿರುವರು. ಮತ್ತೊಂದು ಪ್ರಯೋಜನವೂ ಉಂಟು :- ಒಂದರಲ್ಲಿ ಅವಿಶದವಾದ ಅರ್ಥವಿಶೇಷಗಳು ಮತ್ತೊಂದರಲ್ಲಿ ವಿಶದವಾಗಿವೆ. ಅದಕ್ಕೆ ಮೂಲ ಸೂಕ್ತಿವಿಶೇಷಗಳು ಮತ್ತು ಸಂಕೋಚ ವಿಸ್ತಾರಗಳು. ಇದು ಏಕಕರ್ತೃಕ ಪ್ರಬಂಧವಿಶೇಷಗಳಿಗೂ ಸಮಾನ [ಒಪ್ಪುತ್ತದೆ.]

೫. ಈಶ್ವರನೇ ಜಗತ್ತಿಗೆ ಕಾರಣವಾಗಿರುವನು; ಅದು ಸ್ವೇಚ್ಛೆ ಯಿಂದಲೇ, ಹೇತ್ವಂತರಗಳಿಂದಲ್ಲ. ಸಂಕಲ್ಪ ಮಾತ್ರಾವಕ್ಲ್ಪ್ತವಾದುದರಿಂದ ಜಗತ್ಸೃಷ್ಟಿ ಅನಾಯಾಸವಾಗಿ ಆಗುತ್ತದೆ. ಇದಕ್ಕೆ "ಲೀಲೆಯೇ ಪ್ರಯೋಜನ."

"ಆಕರ : ತತ್ತ್ವತ್ರಯವ್ಯಾಖ್ಯಾನಂ"

೬. "ಅಖಿಲಹೇಯಪ್ರತ್ಯನೀಕತ್ವ ಕಲ್ಯಾಣೈಕತಾನತ್ವ" ಗಳಿಂದ ಈಶ್ವರನು ಅಖಿಲ ಪ್ರಮೇಯವಿಲಕ್ಷಣನಾಗಿರುವಂತೆಯೇ ಅಲ್ಲವೇ "ಅಪೌರು ಷೇಯತ್ವ", ನಿತ್ಯತ್ವಗಳಿಂದ ವೇದ ಅಖಿಲ ಪ್ರಮಾಣವಿಲಕ್ಷಣವಾಗಿರುವ ಪರಿ! ವೇದದ ಅಪೌರುಷೇಯತ್ವಾದಿ [ವೈಭವ] "ವಾಚಾವಿರೂಪಯಾನಿತ್ಯಯಾ" ಇತ್ಯಾದಿ ಶ್ರುತಿ [ತೈತ್ತಿರೀಯ ಸಂಹಿತಾ, ೨-೬-೬೨.]ಯಿಂದಲೂ.

ಅನಾದಿನಿಧನಾಹ್ಯೇಷಾವಾಗುತ್ಸೃಷ್ಟಾ ಸ್ವಯಂಭುವಾ |
ಆದೌ ವೇದಮಯೀ ದಿವ್ಯಾ ಯತಸ್ಸರ್ವಾಃ ಪ್ರಸೂತಯಃ ||

ಇತ್ಯಾದಿ ಸ್ಮೃತಿಗಳಿಂದಲೂ ಪ್ರತಿಪಾದಿಸಲ್ಪಡುತ್ತಿದೆ. ಈ ಶ್ರುತಿ ಸ್ಮೃತಿಗಳು ವೇದನಿತ್ಯತ್ವವನ್ನು ಹೇಳುವುದರಿಂದ ಅದರ ಅಪೌರುಷೇಯತ್ವ ಸಿದ್ಧವಾಗುತ್ತದೆಯಲ್ಲವೇ? ಆದುದರಿಂದಲೇ "ಭ್ರಮ, ವಿಪ್ರಲಂಭ, ಪ್ರಮಾದಾ ಶಕ್ತಿ" ರೂಪದೋಷಚತುಷ್ಟಯಸಂಭಾವನಾಗಂಧರಹಿತವಾಗಿರುವುದು. ಪೌರುಷೇಯತ್ವವೇ ಅವುಗಳು ಬರುವುದಕ್ಕೆ ಕಾರಣ. ಹೀಗಿರುವುದರಿಂದ ಇದ ಕ್ಕಿಂತ ಮೇಲಾದ ಶಾಸ್ತ್ರವಿಲ್ಲ, ಆದುದರಿಂದಲೇ

ಸತ್ಯಂಸತ್ಯಂ ಪುನಸ್ಸತ್ಯಂ ಉದ್ಧೃತ್ಯ ಭುಜಮುಚ್ಯತೇ |
ವೇದಶಾಸ್ತ್ರಾತ್ಪರಂ ನಾಸ್ತಿ ನ ದೈವಂ ಕೇಶವಾತ್ಪರಂ ||

ಎಂದು ಐತಿಹಾಸಿಕರೂ ಪೌರಾಣಿಕರೂ ಏಕಕಂಠವಾಗಿ ಹೇಳಿದ್ದಾರೆ. ಇದರ ಈ ಹಿರಿಮೆಯನ್ನೆಲ್ಲಾ ಮನಸ್ಸಿನಲ್ಲಿಟ್ಟುಕೊಂಡು "ಶುಡರ್ಮಿಹು ಶುರುತಿ" ಎಂದು ನಮ್ಮಾಳ್ವಾರ್ ಹಾಡಿ ಅನುಗ್ರಹಿಸಿರುವರಲ್ಲವೇ !

ಅವರನ್ನು ಅನುಸರಿಸುವ ಅಭಿಯುಕ್ತಾಗ್ರೇಸರರಾದ ಶ್ರೀಪರಾಶರಭಟ್ಟರೂ "ಆದೌವೇದಾಃ ಪ್ರಮಾಣಂ" ಎಂದು (ಶ್ರೀರಂಗರಾಜಸ್ತವ–೨–೧೯) ಹಾಡಿರುವರು.

ಆಕರ : ಶ್ರೀವಚನಭೂಷಣವ್ಯಾಖ್ಯಾನಂ.

೭. ನಮ್ಮಾಳ್ವಾರರ "ತಿರುವಾಯ್ಮೊಳಿ." ದ್ರಾವಿಡವೇದಸಾಗರವಾಗಿ ವಿಸ್ತೀರ್ಣವಾಗಿ ಅನೇಕಾರ್ಥಪ್ರತಿಪಾದಕವಾಗಿರುವುದರಿಂದ ಇದರ ತಾತ್ಪರ್ಯಾರ್ಥವನ್ನರಿಯುವುದು ಎಲ್ಲರಿಗೂ ಕಷ್ಟವೆಂದರಿತು, ಇದರ ಅರ್ಥವಿಶೇಷಗಳನ್ನೂ ಅವುಗಳಲ್ಲಿ ಕಂಡುಬರುವ ಆಳ್ವಾರ್ರ ಮನೋಗತವನ್ನೂ ಈ "ಆಚಾರ್ಯರುಚಿಪರಿಗೃಹೀತವಾದ ಅರ್ಥವೇ ಎಲ್ಲರಿಗೂ ರಕ್ಷಕ" ಎಂಬುದನ್ನೂ ಇವರು [ಅಳಹಿಯಮಣವಾಳಪ್ಪೆರುಮಾಳ್ ನಾಯನಾರ್) ತಮ್ಮ ಪರಮ ಕೃಪೆಯಿಂದ ಪ್ರಕಾಶಪಡಿಸುತ್ತಾ, ಆಚಾರ್ಯಪರಂಪರಾಪ್ರಾಪ್ತವಾದ ಈ ಅರ್ಥಗಳನ್ನೆಲ್ಲರಿಗೂ ತಿಳಿಯಲಾಗುವಂತೆ ಅನತಿಸಂಗ್ರಹ, ಅನತಿವಿಸ್ತಾರವಾಗಿ ಈ "ಆಚಾರ್ಯಹೃದಯ" ಪ್ರಬಂಧದ ಮೂಲಕ ತಿಳಿಸಿದ್ದಾರೆ. "ಆದ್ಯಸ್ಯನಃ ಕುಲಪತೇಃ" ಎನ್ನುವಂತೆ ವೈದಿಕಸನ್ತಾನಕ್ಕೆ ಪ್ರಥಮಾಚಾರ್ಯರಾದ ನಮ್ಮಾಳ್ವಾರ್ ಕರುಣಿಸಿ ರಚಿಸಿರುವ ದಿವ್ಯಪ್ರಬಂಧಗಳಲ್ಲಿರುವ ಅವರ ಮನೋಗತ (ಅಭಿಪ್ರಾಯಗ)ಳನ್ನು ತಿಳಿಸುವುದರಿಂದ ಈ ಪ್ರಬಂಧಕ್ಕೆ "ಆಚಾರ್ಯ ಹೃದಯ"ವೆಂದು ನಿರೂಪಕವಾಯಿತು.

೮. "ಭಾಷ್ಯಕಾರರ್ ಇದ್ದುಕೊಂಡು ಸೂತ್ರವಾಕ್ಯಂಗಳ್ಯೆ ಒರುಂಗವಿಡುವರ್" [೧–೬೫] ಎಂಬುದು ಸೂತ್ರ. [ಇದರ ವ್ಯಾಖ್ಯಾನದ ಅನುವಾದ :] ತಿರುವಾಯ್ಮೊಳಿ.ಯನ್ನು ಪ್ರಮಾಣವಾಗಿ ಸ್ವೀಕರಿಸಿ ಶಾಸ್ತ್ರಾರ್ಥಗಳನ್ನು ನಿರ್ಣಯಿಸಿದವರಾರು ? ಎಂಬ ಪ್ರಶ್ನೆಗೆ ಉತ್ತರವೀಯುತ್ತಾರೆ : ಭಾಷ್ಯಾಕಾರರಿತ್ಯಾದಿ: "ಶ್ರೀಭಾಷ್ಯಕಾರ" ರೆಂದು ಪ್ರಸಿದ್ಧರಾಗಿರುವ ಭಗವದ್ರಾಮಾನುಜಾಚಾರ್ಯರು" ಬ್ರಹ್ಮಸೂತ್ರಗಳಿಗೆ ತಮ್ಮ "ಶಾರೀರಕ ಮೀಮಾಂಸಾಭಾಷ್ಯ" ಎಂಬ "ಶ್ರೀಭಾಷ್ಯವನ್ನು" ಬರೆಯುವಾಗ ಸೂತ್ರವಾಕ್ಯಗಳಲ್ಲಿ ಸಂದಿಗ್ಧವಾಗಿರುವ ಅರ್ಥಗಳನ್ನೆಲ್ಲಾ ಈ ಪ್ರಬಂಧದಲ್ಲಿರುವ ಶ್ರೀಸೂಕ್ತಿಗಳಿಂದ ನಿರ್ಣಯಿಸಿ ಶಂಕೆಗಳಿಗೆ ಸಮಾಧಾನವನ್ನು ಹೇಳುತ್ತಿದ್ದರು.

ಆಕರ: ಆಚಾರ್ಯಹೃದಯ ವ್ಯಾಖ್ಯಾನಂ

೯. "ಭಗವದ್ವಿಷಯಂ"-ಜೀಯರ್ ಅರುಂಬವಂ: "ಈಡು ಮುಪ್ಪತ್ತಾ ರಾಯಿರ ಪ್ಪೆರುಕ್ಕರ್" ಎಂಬ ಅಸಾಧಾರಣ ವೈಭವವುಳ್ಳ ಮಾಮುನಿಗಳವರ "ಈಡು" ವಿವರಣೆಗೆ ಒಂದು ನಿದರ್ಶನವಿದು : ೧-೧-೨ ಎದಿರ್‌ನಿಹಳ್. ಕಳು.ವಿನುಂ. ಈಡುಮೂಲಂ ಕಾಲತ್ರಯತ್ತಿಲುಂ, ಇನನುಂಡು ಒಪ್ಪು, ಅದಿಲ್ಲಾದಾರ್."ಅರುಂಪದಂ" "ಕಾಲೇತಿ" ಕಾಲತ್ರಯತ್ತಿಲುಂ, ಅದಿ ಲ್ಲಾದಾರ್ ಎನ್ರನ್ವಯಂ. "ಇನನುಣರ್ ಮುಳು.ನಲಂ, ಇನನಿಲ್ಲ" ಎಂಬ ಪದಕ್ಕೆ "ಈದೃಶಾಯಸ್ವಾಹಾ,ಕೀದೃಶಾಯಸ್ವಾಹಾ, ತಾದೃಶಾಯ ಸ್ವಾಹಾ, ವಿಸದೃಶಾಯಸ್ವಾಹಾ, ಸುಸದೃಶಾಯ ಸ್ವಾಹಾ" ಎಂಬ [ಯಜುರ್ವೇದ] ೭-೧-೪೯ ಶ್ರುತಿಪ್ರಕ್ರಿಯೆಯಲ್ಲಿ ತಾತ್ಪರ್ಯ. ಈ ಶ್ರುತಿಗೆ ಅರ್ಥವಿದು: ಈ ದೃಶಾಯಸ್ವಾಹಾ-"ಯಥಾಸೈಂಧವಘನಃ"ಎಂದು ಹೇಳಿ, ಈ ರೀತಿ ಇರು ವವನು ಎಂದು ನಿರೂಪಿಸಬೇಕಾದವನು. "ಕೀದೃಶಾಯಸ್ವಾಹಾ-ಅವನಿಗೆ ಸಾಕ್ಷಾತ್ ಉಪಮಾನವಿಲ್ಲ, ಆದುದರಿಂದ"ಕೀದೃಶಃ" ಅವನು ಎಂತಹವನು ? ಎನ್ನಬಹುದು, ಅಷ್ಟೇ. ಇದರಿಂದ ಒಂದರಂತೆಯೂ ಅವನಿಲ್ಲವೆಂದಂತಾ ಯಿತು ! "ತಾದೃಶಾಯಸ್ವಾಹಾ " "ಆಕಾಶವತ್ಸರ್ವಗತಶ್ಚನಿತ್ಯಃ" ಎನ್ನು ವಂತೆ ಒಂದು ಆಕಾರಕ್ಕೆ ಒಂದು ದೃಷ್ಟಾಂತವನ್ನು ಹೇಳಿ "ಹೀಗೆ ಇರುವ ವನು": ತಾದೃಶಃ, ಇಂತಹವನು, ಎಂದು ನಿರೂಪಿಸಬೇಕಾದವನು. "ವಿಸದೃ ಶಾಯ ಸ್ವಾಹಾ" ಉಪಮಾನವಿಲ್ಲದವನೆಂದು ಹೇಳಬೇಕು. ಸುಸದೃಶಾಯ ಸ್ವಾಹಾ, ವೈಧರ್ಮ್ಯ ದೃಷ್ಟಾಂತ ರಹಿತನು ಎಂದರೆ ಸೌಸಾದೃಶ್ಯವುಳ್ಳವನು, ವೈಧರ್ಮ್ಯವಿಲ್ಲದವನು ಎಂದು ಅರ್ಥ. ಹೀಗೆ, ಈದೃಶಾಯ, ತಾದೃಶಾಯ ಎಂದು ಒಂದೊಂದು ಆಕಾರದಲ್ಲಿ ಉಪಮಾನವುಳ್ಳವನೆಂದು ನಿರೂಪಿಸಿ, ಕೀದೃ ಶಾಯ" ಎಂದು ಉಪಮಾನ ರಾಹಿತ್ಯವನ್ನು ತಿಳಿಸಿ, ಸಮುದಾಯವಾಗಿ ಹೋಲಿಕೆ ಇಲ್ಲದಿದ್ದರೂ ಒಂದಾಕಾರದಿಂದಲಾದರೂ ಉಪಮಾನವಿರಬಹುದ ಲ್ಲವೇ ? ಎಂದರೆ, ಅದೂ ಕೂಡ ಇಲ್ಲ ಎಂದು "ವಿಸದೃಶಾಯ" ಎಂಬ ಪದ ತಿಳಿಸುತ್ತದೆ. "ವಿಸದೃಶಾಯ" ಎಂದ ಮೇಲೆ, "ಸುಸದೃಶಾಯ" ಎಂದು ಹೇಳಿರುವುದು ವ್ಯಾಹತವಾಗದೆ ಇರಲು ಇದಕ್ಕೆ "ವೈಧರ್ಮ್ಯ ದೃಷ್ಟಾಂತ" ಭಾವದಲ್ಲಿ ತಾತ್ಪರ್ಯವೆನ್ನುವರು.

೧೦. ಆಳ್ವಾರುಗಳಿಗೆ ಮಂಗಳವಾಗಲಿ ! ಅವರು ಪರಮಕೃಪೆಯಿಂದ ರಚಿಸಿದ ದಿವ್ಯಪ್ರಬಂಧಗಳಿಗೆ ಮಂಗಳವಾಗಲಿ ? ಯಾವ ಕೊರತೆಯೂ ಇಲ್ಲದಂತೆ ಅವುಗಳನ್ನು ಸಂರಕ್ಷಿಸಿದ ಗುರುಗಳಿಗೆಲ್ಲಾ ಮಂಗಳವಾಗಲಿ ! ಏಳು ಲೋಕಗಳೂ ಉಜ್ಜೀವಿಸುವಂತೆ ಅವರು ರಚಿಸಿದ ಗ್ರಂಥಗಳೂ ಋಜುವಾದ ವೇದರಾಶಿಯೊಡನೆ ಸೇರಿ [ಕೂಡಿ] ಬಾಳಲಿ !

—ಉಪದೇಶರತ್ನಮಾಲೈ—೩.

೧೧. ಹಿಂದಿನ ಆಚಾರ್ಯರೆಲ್ಲರೂ ಒಂದೊಂದು ವ್ಯಕ್ತಿಗೆ ಉಪದೇಶಿಸಿ ದರ್ಶನವನ್ನು ರಕ್ಷಿಸಿಕೊಂಡು ಬಂದರು. ಆದರೆ ತಮ್ಮ ಕೃಪಾತಿಶಯದಿಂದ "ಯತಿರಾಜ–ರಾಮಾನುಜರು" ಆ ಕಟ್ಟುಪಾಡನ್ನು ಮೀರಿ ಈ ಲೋಕದಲ್ಲಿ ಆಸೆಯಿರುವವರಿಗೆಲ್ಲಾ ದರ್ಶನಾರ್ಥಗಳನ್ನು ತಿಳಿಸಿರಿ, ಆರ್ಯರೇ, ಎಂದು ಹೇಳಿ ಚೇತನೋಜ್ಜೀವನತತ್ಪರರಾದರು. ನಮ್ಮೊಡೆಯರಾದ ಅ ವ ರು, "ಎಂಬೆರುಮಾನಾರ್",ತಮ್ಮ ಸಾಮರ್ಥ್ಯದಿಂದ "ಪರಮವೈದಿಕ ದರ್ಶನ"ವಾದ ಈ ವಿಶಿಷ್ಟಾದ್ವೈತ" ಸಿದ್ಧಾಂತವನ್ನು ಬೆಳೆಸಿದರು. ಅಂದವಾದ ಈ ಭೂಲೋಕದ ಜನರೆಲ್ಲರೂ ಅದನ್ನರಿಯಲಿ ಎಂದು ಶ್ರೀರಂಗನಾಥನೇ ಈ ದರ್ಶನಕ್ಕೆ "ಎಂಬೆರುಮಾನಾರ್ ದರ್ಶನಂ" [ರಾಮಾನುಜದರ್ಶನ]ವೆಂದು ಹೆಸರಿಟ್ಟು ಅದು ಸುಪ್ರತಿಷ್ಠಿತವಾಗಿರುವಂತೆ ಅನುಗ್ರಹಿಸಿದನು.

—ಉಪದೇಶರತ್ನಮಾಲೈ ೩೭–೩೮

೧೨. ಚೇತನರಿಗೆ ಯಾವ ವಿಧವಾದ ಅಜ್ಞಾನವೂ ಬರದಂತೆ, ಅವರು ಉಜ್ಜೀವಿಸುವಂತೆ, ಖ್ಯಾತಿ ಲಾಭ ಪೂಜಾದಿನಿರಪೇಕ್ಷೆಯಿಂದ ಪರಿಶುದ್ಧವಾದ ಉಪದೇಶ ಮಾಡುವ ನಮ್ಮಾಳ್ವಾರರ ಇಂಪಾದ ನುಡಿಯ ಮೂಲಕವೇ ಅಂದವಾದ ಸಂಸಾರದ ಸೆರೆ ನೀಗುವುದು, ಮುಕ್ತಿ ಲಭಿಸುವುದು.

—ತಿರುವಾಯ್ಮೊಳಿ. ನೂತ್ತಂದಾದಿ.

೧೩. ಅಧಿಕಾರ [ಯೋಗ್ಯತೆ, ಜ್ಞಾನಕರ್ಮ ಭಕ್ತಿಗಳು] ಇದ್ದರೆ ಶ್ರೀರಂಗರಾಜರು ಕೃಪೆ ಮಾಡುವುದಿಲ್ಲವೋ ? ಯತಿರಾಜರೇ ! ತಾವು ಅಧಿಕಾರವಿಲ್ಲದವರಿಗಲ್ಲವೇ ದಯೆ ತೋರಿಸಬೇಕಾದುದು ? ತಾವೂ ಅಧಿಕಾರಿ

ಗಳಿಗೆ ಮಾತ್ರ ಕರುಣಿಸಿದರೆ ನಾವಿನ್ನು ಮಾಡುವುದೇನು ? [ನಮಗೆ ಗತಿ ಏನು ? ಎಂದು ಭಾವ.] —ಆರ್ತಿಪ್ರಬಂಧಂ—೧೪.

೧೫. ನಂದದ ನರಕ (ಸಂಸಾರ)ದಲ್ಲಿ ಮುಳುಗದೆ ಇರಲು ಬಯಸಿದರೆ, ಈ ವಿಶಾಲವಾದ ಭೂಲೋಕದಲ್ಲಿ ನೆಲೆಸಿರುವವರೇ, ಕೇಳಿರಿ :— ನಮ್ಮ ಸ್ವಾಮಿಯಾದ ರಾಮಾನುಜರ ಪಾದವನ್ನು ಆಶ್ರಯಿಸಿರಿ. ಸದಾ ಅವರ ಅಂದಾದಿಯನ್ನು ಅನುಸಂಧಾನ ಮಾಡಿರಿ; ಮನಃ ಕ್ಲೇಶ ತೀರುವಂತೆ ಅವರ ಭಕ್ತರೊಡನೆ ಸೇರಿ ಇರಿ. ಹಾಗಿದ್ದರೆ ತಾನಾಗಿಯೇ ಮುಕ್ತಿ ಸಿದ್ಧಿಸುವುದು. —ಆರ್ತಿಪ್ರಬಂಧಂ—೪೯

## ಶ್ರೀ ವರವರಮುನಿ ಷಟ್ಕಂ

1· ದ್ರಾಕ್ಷಾಮಧಿಕ್ಷಿಪತಿ ನಿಸ್ತ್ರತಿಮಾಕರನ್ದ
ಧಾರಾಂ ಸುಧಾರಸಝರೀಮಧರೀಕರೋತಿ |
ಯತ್ಸಂಪ್ರಣೀತಮತುಲಂ ಯತಿ ಸಾರ್ವಭೌಮ—
ಸ್ತೋತ್ರಂ ಸ ನೋ ವರವರಮುನಿರ್ವಿತನೋತು ಭದ್ರಂ ||

2. ವಿಷ್ಣೋರ್ಯದ್ದರ್ಶನಾರ್ಚಾಸರಣಿಮನುಸರನ್ನರ್ಚನಂ
ಸತ್ವ ಭಾಜಾಂ | ಸಂಘಸ್ಸರ್ವೋऽಪಿ ಕುರ್ವನ್ ಜಯತಿ
ಗುಣನಿಧಿಃ ತತ್ಕಟಾಕ್ಷೈಕಪಾತ್ರಂ | ತಸ್ಮಾತ್ ಕಾನ್ತೋಪಯನ್ತುಃ
ಪ್ರಣತಜನನಿಧೇಃ ಶ್ರೀಮತೋ ದೇಶಿಕೇನ್ದ್ರಾತ್ | ನಾಹಂ ಜಾನೇ
ನ ಜಾನೇ ಪರಮಿಹ ಶರಣಂ ದೈವತಂ ನೈವ ಜಾನೇ ||

3. ಯದೀಯಯೋಪದೇಶರತ್ನಮಾಲಯಾ ಪರಿಷ್ಕೃತಾ
ಯದಂಘ್ರಿ ಪದ್ಮಶೇಖರಾ ಜಯನ್ತಿ ದೇಶಿಕೋತ್ತಮಾಃ |
ತಮಾಶ್ರಿತಸ್ಯ ಸುನ್ದರೋಪಯನ್ತೃಯೋಗಿಶೇಖರಂ
ಭವಾರ್ಣವೋऽಪಿ ಗೋಷ್ಪದತ್ವಮೇತಿ ತತ್ಪ್ರಭಾವತಃ ||

—ವಾದಿಭೀಕರಾರ್ಯಾಃ

4. ಗುಣಮಣಿನಿಧಯೇ ನಮೋನಮಸ್ತೇ
ಗುರುಕುಲಧುರ್ಯ ನಮೋನಮಸ್ತೇ |
ವರವರಮುನಯೇ ನಮೋ ನಮಸ್ತೇ
ಯತಿವರ ತತ್ವವಿದೇ ನಮೋನಮಸ್ತೇ ||

5. ಸತ್ಯಂ ಸತ್ಯಂ ಪುನರಿತಿ ಪುರಾ ಸಾರವಿದ್ಭಿರ್ಯದುಕ್ತಂ
ಬ್ರೂಮಃ ಶ್ರೋತ್ರೈಃ ಶೃಣುತ ಸುಧಿಯೋ ಮತ್ಸರಂ ವರ್ಜಯಿತ್ವಾ ||
ತತ್ವಂ ವಿಷ್ಣುಃ ಪರಮನುಪಮಂ ತತ್ಪದಂಪ್ರಾಪ್ಯಮೇವಂ
ತತ್ಸಂಪ್ರಾಪ್ತೌ ವರವರಮುನಿಃ ದೇಶಿಕೋ ದೀರ್ಘದರ್ಶೀ ||

6. ಯದವತರಣಮೂಲಂ ಮುಕ್ತಿಮೂಲಂ ಪ್ರಜಾನಾಂ
ಶಠರಿಪು ಮುನಿದೃಷ್ಟಾಮ್ನಾಯ ಸಾಮ್ರಾಜ್ಯಮೂಲಂ |
ಕಲಿಕಲುಷ ಸಮೂಲೋನ್ಮೂಲನೇ ಮೂಲಮೇತತ್
ಸ ಭವತು ವರಯೋಗೀನ ಸ್ಸಮಸ್ತಾರ್ಥಮೂಲಂ|| ದೇವರಾಜಗುರುಃ

## ಮಂಗಳಂ

ಕಮಲಾಕುಚಕಸ್ತೂರೀ ಕರ್ದಮಾಂಕಿತವಕ್ಷಸೇ |
ಯಾದವಾದ್ರಿನಿವಾಸಾಯ ಸಂಪತ್ಪುತ್ರಾಯಮಂಗಳಂ ||
ಮಂಗಳಾಶಾಸನಪರೈಃ ಮದಾಚಾರ್ಯಪುರೋಗಮೈಃ |
ಸರ್ವೈಶ್ಚಪೂರ್ವೈರಾಚಾರ್ಯೈಃ || ಸತ್ಕೃತಾಯಾಸ್ತು ಮಂಗಳಂ ||



## ತಿರುನಾರಾಯಣಪುರತ್ತಾಯ್ ಸ್ವಾಮಿ : ಜನನ್ಯಾಚಾರ್ಯರ್



ಮೇಲುಕೋಟೆಗೆ ಬಂದು ಅಲ್ಲಿ ನಿತ್ಯಸಾನ್ನಿಧ್ಯ ಮಾಡಿರುವ ಶ್ರೀರಾಮಾನುಜಾಚಾರ್ಯರನ್ನೂ ಅವರು ಪೂಜಿಸಿ ಲಾಲಿಸಿದ "ತಿರುನಾರಾಯಣಪ್ಪೆರುಮಾಳ್" "ಶೆಲ್ವಪಿಳ್ಳೈ", (ಚೆಲುವರಾಯಸ್ವಾಮಿ)ಯನ್ನೂ ಸಂದರ್ಶಿಸಿ, ಅವರ ಅಂತರಂಗ ಭಕ್ತರಾಗಿ ಹೂಮಾಲೆಗಳನ್ನು ಕಟ್ಟಿ ಸಮರ್ಪಿಸುತ್ತಾ ಕ್ಷೀರಕೈಂಕರ್ಯ ಪರರಾಗಿದ್ದ "ಆಯಿದೇವರಾಜರ್" ಎಂಬ (ಆಸೂರಿಪ್ಪೆರುಮಾಳ್ ಸಿರಿವಂಶದಲ್ಲಿ ಜನಿಸಿದ) "ಜನನ್ಯಾಚಾರ್ಯ", "ಮಾತೃಗುರು", "ಶ್ರೀಸಾನುದಾಸರ್", "ತಿರುತ್ತಾಳ್ವರೈ ತಾತರ್" ಎಂಬ "ಶ್ರೀಶಾನುದಾಸ" "ಗುರುವರ್ಯ" ರ ಬಳಿ "ಆಚಾ ರ್ಯಹೃದಯಂ" ಎಂಬ ರಹಸ್ಯ ಗ್ರಂಥದ ಅರ್ಥಗಳನ್ನು ಕೇಳಬೇಕೆಂಬ ಹಿರಿಯ ಆಸೆ ಶ್ರೀವರವರಮುನಿಗಳಿಗೆ ಇದ್ದರೂ ಅದು ನೆರವೇರಲಿಲ್ಲ. ಏಕೆಂದರೆ ಅವರ ವೈಭವವನ್ನು ಕೇಳಿ ಅವರನ್ನು ಸಂದರ್ಶಿಸಲು ಆಳ್ವಾರ್ ತಿರುನಗರಿಗೆ ಆಯಿಸ್ವಾಮಿ ಮೇಲುಕೋಟೆಯಿಂದ ಹೊರಟು ಬಿಟ್ಟಿದ್ದರು. ಈ ಮಹಾತ್ಮರಿಬ್ಬರೂ ತಿರುನಗರಿ ಬಳಿ ಸಂಧಿಸಿದರು. ತಿರುನಗರಿಯಲ್ಲಿ ಶ್ರೀಆಯಿಸ್ವಾಮಿ ಆಚಾರ್ಯಹೃದಯದ ರಹಸ್ಯಾರ್ಥಗಳನ್ನೆಲ್ಲ ಉಪದೇಶಿಸಿದರು. ಅಲ್ಲಿಂದ ಹಿಂದಿರುಗಿಬಂದಮೇಲೆ ಆಯಿಸ್ವಾಮಿಯವರು ಸನ್ಯಾಸಾಶ್ರಮವನ್ನು ಸ್ವೀಕರಿಸಿ ದರ್ಶನಪ್ರವರ್ತಕರಾಗಿ ಯದುಗಿರಿಯಲ್ಲಿಯೇ ನೆಲೆಸಿದ್ದರು. ಶ್ರೀಮಣವಾಳಮಾಮುನಿಗಳವರು ಪರಮಪದವನ್ನಲಂಕರಿಸಿದ ಮೇಲೆ ಅವರ ದಿವ್ಯ ಮಂಗಳ ವಿಗ್ರಹ ಶ್ರೀ ಆಯಿಯವರ ಪ್ರೇರಣೆಯಿಂದ ಮೇಲುಕೋಟೆಯಲ್ಲಿ ಪ್ರತಿಷ್ಠಿಸಲ್ಪಟ್ಟಿತೆಂದು ಹೇಳುತ್ತಾರೆ. ಶ್ರೀರಾಮಾನುಜಚಾರ್ಯರ ಸನ್ನಿಧಿಯಲ್ಲಿದ್ದ ಈ ಮೂರ್ತಿಯನ್ನು ನಾಗಮಂಗಲದ ತಿಮ್ಮಣ್ಣ ದಂಡನಾಯಕರೆಂಬ ವೈಷ್ಣವ

ಶಿಖಾಮಣಿ ಈಗಿರುವ ಸನ್ನಿಧಿಯನ್ನು ಕಟ್ಟಿಸಿ ಬಿಂಬಪ್ರತಿಷ್ಠೆ ಮಾಡಿಸಿದರು. ಹೀಗೆ ಶ್ರೀವರವರಮುನಿಗಳವರ ವೈಭವವನ್ನರಿತು ಪ್ರಕಟಿಸಿದ ಜನನ್ಯಾಚಾರ್ಯರ ಮೂರ್ತಿಯನ್ನು ಹಿರಿಯರು ಕೃತಜ್ಞತೆಯಿಂದ ಶ್ರೀಜೀಯರ್ ಸನ್ನಿಧಿಯ ಹೊರಗಣ ಪಶ್ಚಿಮ ಪ್ರಾಕಾರದ ಗೋಡೆಯಲ್ಲಿ ಕೆತ್ತಿಸಿದಾರೆ. ಪ್ರಾಯಶಃ ತೇರಿನ ಬಳಿ, ಇಲ್ಲಿ, ಅವರು ಪಾಸಿಗಳಾದ ಮೇಲೆ ತಂಗಿ ದೇವರಸೇವೆ ಮಾಡುತ್ತಾ ನಮ್ಮ ಪ್ರದರ್ಶನವನ್ನು ನಿರ್ವಹಿಸುತ್ತಾ ಬಂದರೆಂದು ತೋರುತ್ತದೆ.

## ಶ್ರೀಶಠನುದಾಸ ಗ್ರನ್ಥಮಾಲಾ

### ಪ್ರಕಟಣೆಗೆ ಸಿದ್ಧವಾಗಿರುವ ಗ್ರಂಥಗಳು

೧. ತಿರುವಾಯ್ಮೊಳಿ.ನೂತ್ತನ್ದಾದಿ – ಶ್ರೀಮಣವಾಳಮಾಮುನಿಗಳ ಪ್ರಬಂಧ, "ತಿರುವಾಯ್ಮೊಳಿ."ಯ ನೂರು ಗೀತೆಗಳ ಸಾರಾಂಶ
೨. "ಶ್ರೀವರವರಮುನಿದಿನಚರ್ಯಾ" ಕರ್ಣಾಟಕ ವ್ಯಾಖ್ಯಾನಂ
೩. "ಶ್ರೀಯತಿರಾಜವಿಂಶತಿ" ಕರ್ಣಾಟಕ ವ್ಯಾಖ್ಯಾನಂ"
೪. "ಅಷ್ಟಶ್ಲೋಕೀ" ಕರ್ಣಾಟಕ ವ್ಯಾಖ್ಯಾನಂ
೫. ಶ್ರೀವಚನಭೂಷಣಂ–ಕರ್ಣಾಟಕಾನುವಾದ
೬. "ಶ್ರೀಮದ್ರಾಮಾಯಣೋಪನ್ಯಾಸ ಮಾಲಾ"

ಶ್ರೀ. ಉ. ವೇ. ದೇಶಿಕಾಚಾರ್ಯರೆಂದು ಪೂರ್ವಾಶ್ರಮದಲ್ಲಿ ಪ್ರಸಿದ್ಧರಾಗಿದ್ದು, ಯದುಗಿರಿಯಲ್ಲಿ ಸನ್ಯಾಸಾಶ್ರಮವನ್ನು ಸ್ವೀಕರಿಸಿ ಭಗವದ್ವಿಷಯ ಶ್ರೀಭಾಷ್ಯಾದಿ ಕಾಲಕ್ಷೇಪ ಗೋಷ್ಠಿಗಳನ್ನು ನಡೆಸಿದ, ಶ್ರೀರಂಗ ನಾರಾಯಣ ಜೀಯರ್ ಮಠಾಧಿಪತಿಗಳಾಗಿದ್ದ. ಶ್ರೀ ಸಂಪತ್ಕುಮಾರ ರಾಮಾನುಜಮುನಿಗಳವರ ಹದಿನಾಲ್ಕು ಉಪನ್ಯಾಸಗಳ ಕನ್ನಡ ಅನುವಾದ. ರಸಿಕರಿಗೆ ರಸಗವಳ!

ವಿವರಗಳಿಗೆ :–

ಆ. ನ. ಶ್ರೀನಿವಾಸೈಯಂಗಾರ್
ಶ್ರೀ ಗೋದಾ ಮಂದಿರಂ, ನಂ. 34, ಒಂಬತ್ತನೇರಸ್ತೆ,
ಈಜುವ ಕೊಳದ ಬಡಾವಣೆ, ಮಲ್ಲೇಶ್ವರಂ ಪೋಸ್ಟ್, ಬೆಂಗಳೂರು–೩

ಶ್ರೀ ಕಂಠೇಶ್ವರ ಪವರ್ ಪ್ರೆಸ್, ಲಿಂಕ್ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-3